# ಅರಿವಿನ ಜಾಗೃತಿ ಮತ್ತು ಸಾಕ್ಷರತೆ

ಕಿರಣ ಕಮಲ ಪ್ರಸಾದ



ಜನ ಜಾಗೃತಿ ಗುಡ್ಡಹಟ್ಟಿ ಅತ್ತಿಬೆಲೆ
ಆನೇಕಲ್

# ಮತ್ತು
# ಸಾಕ್ಷರತೆ

ಕರ್ನಾಟಕದ ಹಳ್ಳಿಗಳ ಪರಿಸ್ಥಿತಿ ಹಾಗೂ ಕನ್ನಡ ಭಾಷೆಗಳಿಗೆ
ಅನ್ವಯಿಸುವಂತೆ ಸಿದ್ಧಪಡಿಸಿದ ಅರಿವಿನ ಜಾಗೃತಿಯ ಕಾರ್ಯಕ್ರಮ

## ಭಾಗ - ೧

## ತಾತ್ವಿಕ ವಿಷಯಗಳು ಮತ್ತು ರೂಪರೇಷೆಗಳು

ಲೇಖಕರು :
ವಿ. ಬ. ಕಿರಣ ಕಮಲ ಪ್ರಸಾದ

ಪ್ರಕಾಶಕರು :
ಜನಜಾಗೃತಿ
ಗುಡ್ಡಹಟ್ಟಿ, ಅತ್ತಿಬೆಲೆ, ಅನೇಕಲ್ ೫೬೨ ೧೦೭

| | |
|---|---|
| Author © | ಲೇಖಕರು |
| Title | ಹೆಸರು |
| Conscientization and Literacy | ಅರಿವಿನ ಜಾಗೃತಿ ಮತ್ತು ಸಾಕ್ಷರತೆ |
| Part - I | ಭಾಗ – 1 |
| Theoretical issues & outlines | ತಾತ್ವಿಕ ವಿಷಯಗಳು ಮತ್ತು ರೂಪರೇಷೆಗಳು |
| Language | ಭಾಷೆ |
| Kannada | ಕನ್ನಡ |
| Publishers | ಪ್ರಕಾಶಕರು |
| Jana Jagruthi | ಜನಜಾಗೃತಿ |
| Guddahatti | ಗುಡ್ಡಹಟ್ಟಿ |
| Attibele 562 107 | ಅತ್ತಿಬೆಲೆ ೫೬೨ ೧೦೭ |
| Printers | ಮುದ್ರಕರು |
| Pallavi Printers | ಪಲ್ಲವಿ ಮುದ್ರಣಾಲಯ |
| S. G. Palya | ಎಸ್. ಜಿ. ಪಾಳ್ಯ |
| Bangalore-560 029 | ಬೆಂಗಳೂರು-560 029 |
| Pages | ಪುಟಗಳು |
| 52 + xii | 52 + xii |
| 1st Impression | ಮೊದಲ ಮುದ್ರಣ |
| May 1986 | ಮೇ 1986 |
| Copies 1000 | ಪ್ರತಿಗಳು 1000 |
| 2nd Impression | ಎರಡನೆ ಮುದ್ರಣ |
| January 1991 | ಜನವರಿ 1991 |
| Copies 1000 | ಪ್ರತಿಗಳು 1000 |
| Price | ಬೆಲೆ |
| Rs. 8-00 | ರೂ. 8-00 |

# ವಿಷಯ ಸೂಚಿ

# ಮೊದಲ ಮಾತು

'ಅರಿವಿನ ಜಾಗೃತಿ ಮತ್ತು ಸಾಕ್ಷರತೆ' ಎಂಬ ಈ ಕಿರುಹೊತ್ತಿಗೆ ಬ್ರೆಝಿಲ್ ದೇಶದ ವಿದ್ಯಾತಜ್ಞ ಪಾಉಲೊ ಫ್ರೈರೆಯವರು ಯಶಸ್ವಿಯಾಗಿ ಸಾಧಿಸಿದ ವಯಸ್ಕರ ಶಿಕ್ಷಣದ ತತ್ವಗಳನ್ನು ಒಳಗೊಂಡಿದೆ. ಅದೇ ತತ್ವಗಳನ್ನು ಅನುಸರಿಸಿ ಕರ್ನಾಟಕದ ಗ್ರಾಮೀಣ ಪ್ರದೇಶಗಳಲ್ಲಿ ನಡೆಸಿದ ಕಾರ್ಯಕ್ರಮಗಳ ಅನುಭವವನ್ನು ಅದು ಹೇಳುತ್ತದೆ. ಕನ್ನಡ ಭಾಷೆಗೆ ಫ್ರೈರೆಯವರ ತತ್ವಗಳನ್ನು ಇತರರು ಭಾಷಾಂತರಿಸಿದ್ದಾರೆ. ಆದರೆ ಕಿರಣರು ಈ ತತ್ವಗಳ ಸಾರಾಂಶದೊಂದಿಗೆ, ಈ ಪದ್ಧತಿಯನ್ನು ಅನುಸರಿಸಿ ಕನ್ನಡ ಅಕ್ಷರಜ್ಞಾನವನ್ನು ಹೇಗೆ ಮಾಡಿಕೊಡಬಹುದೆಂದು ತೋರಿಸಿಕೊಟ್ಟಿದ್ದಾರೆ.

ಕರ್ನಾಟಕದಲ್ಲಿ ಪರಿಶಿಷ್ಟಜಾತಿ ಮತ್ತು ಬುಡಕಟ್ಟಿಗೆ ಸೇರಿದವರು ಹಾಗೂ ಕೂಲಿಯಾಳುಗಳು ಬಹಳ ಶೋಷಣೆಗೆ ಒಳಗಾಗುತ್ತಾರೆ. ಯಾವುದೇ ಲಾಭದಾಯಕ ಆರ್ಥಿಕ ಪ್ರವೃತ್ತಿಯಲ್ಲಿ ಅವರಿಗೆ ಪಾಲಿಲ್ಲ. ಅವರಲ್ಲಿ ಹೆಚ್ಚಿನ ಕುಟುಂಬಗಳು ತಮ್ಮ ಅನಾನುಕೂಲ ಪರಿಸ್ಥಿತಿಯ ಒತ್ತಡದಿಂದ ತಮ್ಮ ಮಕ್ಕಳನ್ನು ಶಾಲೆಗೆ ಕಳಿಸಲೊಲ್ಲರು. ಹೇಳಿದ ಕೆಲಸ ಮಾಡಿ ಕೊಟ್ಟ ಕೂಲಿ ಪಡೆಯುವುದು, ಹಣಕೊಟ್ಟವರಿಗೆ ಓಟುಹಾಕಿ ಅವರು ತಮ್ಮ ಅವಶ್ಯಕತೆಗಳನ್ನು ಪೂರೈಸುವರು ಎಂದು ಸತತವಾಗಿ ಕಾಯುವುದು, ತಮ್ಮ ಅಭಿವೃದ್ಧಿಗಾಗಿ ಸರಕಾರ ಹೂಡಿರುವ ಯೋಜನೆಗಳ ಲಾಭಪಡೆಯಲು ಲಂಚ ಕೊಡುವುದಕ್ಕೋಸ್ಕರ ಸಾಲ ಪಡೆಯುವುದು, ನಾನಾ ಅನ್ಯಾಯಗಳನ್ನು ಮೌನವಾಗಿ ಸಹಿಸುವುದು ಈ ಜನರ ಪಾಡು. ಇವರಲ್ಲೂ ಮಹಿಳೆಯರು ಮತ್ತು ಮಕ್ಕಳು ಅಲ್ಪಶಕ್ತಿಯುಳ್ಳವರಾದ ಕಾರಣ ಇನ್ನೂ ಅಧಿಕ ಶೋಷಣೆಗೆ ಒಳಗಾಗುತ್ತಾರೆ. ಮಾನವೀಯತೆ ಉಳ್ಳವರು ಇಂತಹ ಪರಿಸ್ಥಿತಿಯನ್ನು ಎಂದೂ ಒಪ್ಪಲಾಗದು.

ಅಂದಮೇಲೆ ಎಷ್ಟೋ ಯುವಜನರು ಕರ್ನಾಟಕದಲ್ಲಿ ವ್ಯಾಪಿಸಿದ ಈ ಶೋಷಿತ ಪರಿಸ್ಥಿತಿಯನ್ನು ಬದಲಾಯಿಸಲು ಹೋರಾಡುತ್ತಾರೆ. ಹತ್ತಿಕ್ಕಿದ ಜನರನ್ನು ತಮ್ಮ ಜೀವನವನ್ನು ತಾವೇ ನಿಯಂತ್ರಿಸುವಂತೆ ಪ್ರೋತ್ಸಾಹಿಸುತ್ತಾರೆ. ಪಾಉಲೊ ಫ್ರೈರೆಯವರು ವಯ್ಸಕರ ಶಿಕ್ಷಣದ ಮೂಲಕ ಇಂತಹ ಪ್ರಯತ್ನದಲ್ಲಿ ಬ್ರೆಝಿಲ್ ಮತ್ತು ಚಿಲಿ ದೇಶಗಳಲ್ಲಿ ಯಶಸ್ವಿಯಾದರು. ಅವರು ಪಾಲಿಸಿದ ತತ್ವಗಳನ್ನು ಮತ್ತು ಅನುಸರಿಸಿದ ಶಿಕ್ಷಣಕ್ರಮವನ್ನು ವಿವರಿಸುವ ಈ ಪುಸ್ತಕವೂ ಸಮಾಜವನ್ನು ಪುನರ್ರೂಪಿಸುವ ಹೋರಾಟದಲ್ಲಿ ತೊಡಗಿದ ಯುವಜನರಿಗೆ ಸಹಾಯವಾಗುವುದು.

ನಮ್ಮ ರಾಜ್ಯದಲ್ಲಿ ಅನಕ್ಷರಸ್ಥ ವಯಸ್ಕರು ಮಿಲಿಯಗಟ್ಟಲೆ ಇದ್ದಾರೆ. ವಯಸ್ಕರ ಶಿಕ್ಷಣ ಕ್ಷೇತ್ರದಲ್ಲಿ ಸ್ವಯಂಸೇವಾ ಸಂಸ್ಥೆಗಳು ಮುಂದಾಳುತನ ವಹಿಸಿದ್ದುವು. ಈಗ ರಾಷ್ಟ್ರೀಯ ವಯಸ್ಕರ ಶಿಕ್ಷಣ ಯೋಜನೆ ಹಾಗೂ ರಾಜ್ಯ ಸರಕಾರದ ಅಕ್ಷರಸೈನ್ಯ ಇದ್ದರೂ ಗುರಿ ಮತ್ತು ಸಾಧನೆಗಳ ಮಧ್ಯೆ ಇರುವ ಅಂತರ ಬಹಳ ದೊಡ್ಡದಾಗಿದೆ.

ಈ ಅಕ್ಷರತೆಯ ಪಿಡುಗನ್ನು ಹೋಗಲಾಡಿಸುವುದಕ್ಕೋಸ್ಕರ ವಯಸ್ಕರಿಗೆ ಪಾಠ ಹೇಳಿಕೊಡುವ ಶ್ಲಾಘನೀಯ ಸೇವೆ ಮಾಡಲು ಸ್ವಯಂಸೇವಕರು ಇಲ್ಲವೆಂದು ಊಹಿಸುವುದು ಸರಿಯಲ್ಲ. ಕಾಲೇಜು ವಿದ್ಯಾರ್ಥಿಗಳಲ್ಲಿ ಹಾಗೂ ಹಳ್ಳಿಗಳ ಯುವಜನ ಮಂಡಳರಲ್ಲಿ ಸಾಕಷ್ಟು ಆಸಕ್ತಿ ಇದೆ. ಆದರೂ ಅವರಿಗೆ ಪಾಠ ನಡೆಸುವ ಕ್ರಮ ಹೇಳಿಕೊಡುವವರಿಲ್ಲ. ಇನ್ನೂ ಕೆಲವರು ವಾಸ್ತವಿಕ ಪಠ್ಯಪುಸ್ತಕಗಳಿಗೂ, ಜೀವನಕ್ಕೂ ಸಂಬಂಧವಿಲ್ಲ ಎಂದು ದೂರುತ್ತಾರೆ. ಮತ್ತಿತರರು ವಯಸ್ಕರು ಪಾಠದಲ್ಲಿ ಆಸಕ್ತಿ ವಹಿಸುವುದಿಲ್ಲ ಎಂದು ಬೇಸರಪಡುತ್ತಾರೆ.

ಪಾಉಲೊ ಫ್ರೇರೆಯವರ ಶಿಕ್ಷಣಕ್ರಮ ಜನರಲ್ಲಿ ಆಸಕ್ತಿ ಮೂಡಿಸುವಂತಹದು. ಜನರ ಜೀವನವೇ ಅದರ ಪಠ್ಯವಸ್ತು, ಸಾಮಾನ್ಯ ಬಳಕೆಯಲ್ಲಿರುವ ಪದಗಳೇ ವಯಸ್ಕರು ಕಲಿಯುವ ವಿಷಯ. ಅವರು ಕಟ್ಟುವ ವಾಕ್ಯಗಳು ತಮ್ಮ ಜೀವನ ಸ್ಥಿತಿಯನ್ನು ಪ್ರತಿಬಿಂಬಿಸುವಂತಹವು, ತಮ್ಮ ಶೋಷಣೆಯ ಕಾರಣಗಳನ್ನು ವ್ಯಕ್ತಪಡಿಸುವಂತಹವು ಹಾಗೂ ಹೊಸ ಸಮಾಜದ ಯೋಜನೆಯ ರೂಪರೇಷೆಗಳನ್ನು ಪ್ರತಿಬಿಂಬಿಸುವಂತಹವು. ಇಂತಹ ಅರ್ಥಭರಿತ ಅಕ್ಷರಜ್ಞಾನದೊಡನೆ ಶೋಷಿತ ಮಾನವನ ವಿಮೋಚನೆಯೂ ಸಾಧ್ಯ.

ನೂರಾರು ಸಮಾಜ ಕಾರ್ಯಕರ್ತರು ಈ ಪುಸ್ತಕದ ಲಾಭ ಪಡೆಯಲಿ. ಲಕ್ಷಾಂತರ ವಿದ್ಯಾವಂತರು ಈ ಕ್ರಮವನ್ನು ಬಳಸಿ ತಮ್ಮ ನೆರೆಹೊರೆಯಲ್ಲಿ ಪಾಠನಡೆಸಿ ಅನಕ್ಷರತೆಯನ್ನು ಸಂಪೂರ್ಣ ನಿರ್ಮೂಲಗೊಳಿಸುವುದರ ಜೊತೆಗೆ ತಮ್ಮ ಶೋಷಿತ ಬಂಧು ಭಗಿನಿಯರಿಗೆ ವಿಮೋಚನೆಯ ಪ್ರಯತ್ನದಲ್ಲಿ ಸಹಾಯಕರಾಗಲಿ.

ಈ ಕೃತಿಯನ್ನು ಹಿಂಬಾಲಿಸಿ ಪ್ರೇರಕರ ಅನುಕೂಲಕ್ಕಾಗಿ ಇನ್ನೆರಡು ಹೊತ್ತಿಗೆಗಳು ಸಿದ್ಧವಾಗುತ್ತವೆ. ಇನ್ನೆರಡು ತಿಂಗಳುಗಳೊಳಗೆ ಅವು ನಿಮ್ಮ ಕೈಸೇರುವುವು ಎಂದು ಲೇಖಕರು ಭರವಸೆ ಕೊಡುತ್ತಾರೆ.

ಯೇ. ಸ. ರೂಪರ್ಟ್ ರೊಸಾರಿಯೋ

# ಪ್ರವೇಶಕ್ಕೆ ಮುನ್ನ

## ವಯಸ್ಕರ ಶಿಕ್ಷಣ ಮತ್ತು ಅರಿವಿನ ಜಾಗೃತಿ

ವ್ಯಾಪಕ ಅನಕ್ಷರತೆ ಹಿಂದುಳಿದ ರಾಷ್ಟ್ರಗಳ ಬಹುದೊಡ್ಡ ಸಮಸ್ಯೆಗಳಲ್ಲಿ ಒಂದಾಗಿದೆ. ಅನಕ್ಷರತೆ ಒಂದು ರಾಷ್ಟ್ರದ ಪ್ರಗತಿಪರ ಧೋರಣೆಗಳನ್ನು ಯಶಸ್ವಿಯಾಗಲು ಬಿಡುವುದಿಲ್ಲ. ಆದ್ದರಿಂದ ಈ ಶತಮಾನದಲ್ಲಿ ಸ್ವಾತಂತ್ರ್ಯವನ್ನು ಪಡೆದಿರುವ ಪ್ರತಿಯೊಂದು ಹಿಂದುಳಿದ ರಾಷ್ಟ್ರವು ಅನಕ್ಷರಸ್ಥ ವಯಸ್ಕರ ಶಿಕ್ಷಣದತ್ತ ಹೆಚ್ಚಿನ ಗಮನವನ್ನು ಹರಿಸುತ್ತದೆ. ಭಾರತದಲ್ಲೂ ಕೂಡ ಸ್ವಾತಂತ್ರ್ಯಪೂರ್ವದಿಂದಲೇ ವಯಸ್ಕರ ಶಿಕ್ಷಣದ ಬಗ್ಗೆ ಹಲವಾರು ಪ್ರಯತ್ನಗಳು ನಡೆದಿವೆ. ಆದರೆ ಈ ಎಲ್ಲಾ ಪ್ರಯತ್ನಗಳಿಂದ ಅನಕ್ಷರಸ್ಥರ ಪ್ರಮಾಣ ಸಾಕಷ್ಟು ಕಡಿಮೆಯಾಗಿಲ್ಲ ಎಂಬುದು ಶೋಚನೀಯ ಸಂಗತಿ.

ಇದಕ್ಕೆ ಮುಖ್ಯಕಾರಣ ವಯಸ್ಕರ ಶಿಕ್ಷಣ ವಿಧಾನಗಳ (methods of education)ಲ್ಲಿ ಅನಕ್ಷರಸ್ಥ ವಯಸ್ಕರಿಗೇ ಅನ್ವಯಿಸುವಂತಹ ಒಂದು ವಿಶಿಷ್ಟ ಶಿಕ್ಷಣಕ್ರಮ (pedagogy) ವನ್ನು ಅನುಸರಿಸದೇ ಇದ್ದುದು. ಪ್ರಚಲಿತ ಶಿಕ್ಷಣ ವ್ಯವಸ್ಥೆ (system of education) ಯಲ್ಲಿ, ಅಂದರೆ ಶಾಲೆಗಳಲ್ಲಿ, ಚಿಕ್ಕಮಕ್ಕಳಿಗೆ ಅಕ್ಷರಜ್ಞಾನವನ್ನು ಕೊಡುವ ವಿಧಾನಗಳನ್ನೇ ವಯಸ್ಕರ ಶಿಕ್ಷಣದ ಪಠ್ಯಪುಸ್ತಕಗಳಲ್ಲಿ ಅಳವಡಿಸಿದೆ. ಅಲ್ಲಿ ತಾಂತ್ರಿಕತೆಗೆ ಮಹತ್ವ; ವಿಚಾರ ವಿನಿಮಯಕ್ಕೆ, ಜ್ಞಾನ ಸೃಷ್ಟಿಗೆ ಅಲ್ಲ. ಅಲ್ಲಿ ಶಿಕ್ಷಣಕ್ಕೂ ಜೀವನಕ್ಕೂ ಸಂಬಂಧ ಮೂಡಿ ಬರುವುದಿಲ್ಲ. ಅಲ್ಲಿ ಅನಕ್ಷರಸ್ಥ ವಯಸ್ಕರಲ್ಲಿ ಬಹುಪಾಲು ಮಂದಿಯಾದ ದಲಿತರ ಜೀವನದ ಕಡುಸತ್ಯವಾದ ಶೋಷಣೆಯ ವಿವೇಚನೆ ಇಲ್ಲ.

ಕೆಲವು ಕಡೆ ವಯಸ್ಕರ ಶಿಕ್ಷಣ ಎಂದರೆ ಕೇವಲ ಸಾಕ್ಷರತೆ (literacy), ಅಂದರೆ ಓದು ಬರಹ ಮತ್ತು ಅಲ್ಪಸ್ವಲ್ಪ ಅಂಕಿಮಗ್ಗಿಗಳ ಜ್ಞಾನ ನೀಡುವುದು. ಇನ್ನೂ ಕೆಲವು ಕಡೆ ಸಾಕ್ಷರತೆಯೊಡನೆ ಕಾರ್ಯಾತ್ಮಕತೆ (functionality-functional literacy) ಯ ಸಂಯೋಜನೆ ಇದೆ. ಅಂದರೆ ಬೇಸಾಯ ಅಥವಾ ಇತರ ಕಸುಬುಗಳ ಬಗ್ಗೆ ವೈಜ್ಞಾನಿಕವಾದ ತರಬೇತಿ ನೀಡುವ ಮೂಲಕ ಸಾಕ್ಷರತೆಯನ್ನು ಸಾಧಿಸುವುದು.

ಭಾರತ ಸರಕಾರವು 1978ರ ಅಕ್ಟೋಬರ್ 2ನೇ ತಾರೀಕಿನಲ್ಲಿ ಒಂದು ಮಹತ್ವಾಕಾಂಕ್ಷಿಯಾದ ಹೊಸ ವಯಸ್ಕರ ಶಿಕ್ಷಣ ಯೋಜನೆಯನ್ನು ಜಾರಿಗೆ ತಂದಿತು. ಈ ಹೊಸ ಯೋಜನೆಯ ಧ್ಯೇಯದಲ್ಲಿ ಸಾಕ್ಷರತೆ ಮತ್ತು ಕಾರ್ಯಾತ್ಮಕತೆಯೊಂದಿಗೆ ಅರಿವಿನ ಜಾಗೃತಿ (conscientization) ಯ ಅವಶ್ಯಕತೆಯ ಬಗ್ಗೆಯೂ ಪ್ರಸ್ತಾಪಿಸಲಾಗಿದೆ. ಅರಿವಿನ ಜಾಗೃತಿ ಎಂದರೆ ಒಂದು ಸಮಾಜವು ಸಂಘಟಿತವಾಗಿ ತನ್ನ ಸಮಸ್ಯೆಗಳನ್ನು ಅರಿತು ಅವುಗಳನ್ನು ಪರಿಹರಿಸಲು ಯೋಗ್ಯವಾದ ಕೆಲಸಗಳನ್ನು ಮಾಡುವುದು. ಆದರೆ ಈ ಧ್ಯೇಯವನ್ನು ಅನುಸರಿಸಿ ರೂಪಿಸಿದ ವಯಸ್ಕರ ಶಿಕ್ಷಣದ ಕಾರ್ಯಕ್ರಮಗಳಲ್ಲಿ ಮತ್ತು ಪಠ್ಯಪುಸ್ತಕಗಳಲ್ಲಿ ಎದ್ದುತೋರುವ ಅಂಶವೇದರೆ ಒಂದೇ ಅರಿವಿನ ಜಾಗೃತಿಯನ್ನು ಸಂಪೂರ್ಣವಾಗಿ ಕೈಬಿಟ್ಟಿರುವುದು ಅಥವಾ ಅದನ್ನು ತಪ್ಪಾಗಿ ಅರ್ಥಮಾಡಿಕೊಂಡಿರುವುದು ಅಥವಾ ಅದಕ್ಕೆ ಕಾರ್ಯಾತ್ಮಕತೆಯ ಸಂಕುಚಿತಾರ್ಥವನ್ನು ಕಲ್ಪಿಸಿರುವುದು. ಅವುಗಳ ಪ್ರಕಾರ ಅರಿವಿನ ಜಾಗೃತಿಯ ಕಲ್ಪನೆ ಈ ರೀತಿ ಇದೆ: ಬಹುಸಂಖ್ಯಾತ ಅನಕ್ಷರಸ್ಥ ವಯಸ್ಕರು, ಸಣ್ಣ, ಅತಿ ಸಣ್ಣ ರೈತರು ಮತ್ತು ಭೂ ಕಾರ್ಮಿಕರು. ಅವರ ಜೀವನದ ಬಹುಮುಖ್ಯ ಲಕ್ಷಣ ಬಡತನ. ಈ ಬಡತನಕ್ಕೆ ಕಾರಣ ತಮ್ಮ ವ್ಯವಸಾಯದ ಬಗ್ಗೆ ವೈಜ್ಞಾನಿಕ ದೃಷ್ಟಿಯನ್ನೂ ಜ್ಞಾನವನ್ನೂ ಪಡೆಯದಿದ್ದುದು. ವಯಸ್ಕರ ಶಿಕ್ಷಣವಿಧಾನದಲ್ಲಿ ಚರ್ಚೆಗೆ ಪ್ರಾಧಾನ್ಯ ಕೊಟ್ಟಿರುವುದೇನೋ ನಿಜ. ಆದರೆ ಅದರ ಉದ್ದೇಶ ಕೇವಲ ಯಾವುದೇ ವಿಷಯದ ಬಗ್ಗೆ ಜನರ ವಾಸ್ತವಿಕ ತಿಳುವಳಿಕೆಗಳನ್ನು ಕೂಡಿಸುವುದು. ಈ ರೀತಿ ಅವರಿಂದ ಮಾಹಿತಿಯನ್ನು ಪಡೆದ ಮೇಲೆ ಪೂರ್ವಸಿದ್ಧಿತ ಒಂದು ಪಾಠದ ಮುಖಾಂತರ ಸರಿಯಾದ ಜ್ಞಾನವನ್ನು ನೀಡುವುದು. ಆ ಜ್ಞಾನ ಬೇಸಾಯದ ಬೇರೆ ಬೇರೆ ವಿಷಯಗಳನ್ನು ಹೊಂದಿಕೊಂಡಿರುತ್ತದೆ. ಉದಾಹರಣೆಗೆ–ದನದ ತಳಿಗಳು, ಮಣ್ಣು–ಮಣ್ಣುಪರೀಕ್ಷೆ, ಗೊಬ್ಬರ, ಬೀಜ, ಕ್ರಿಮಿನಾಶಕಗಳು, ಮಾರುಕಟ್ಟೆ, ಸಹಕಾರ ಸಂಘ ಇತ್ಯಾದಿ.

ಆದರೆ ಒಟ್ಟಿನಲ್ಲಿ ಅಂತಿಮವಾಗಿ ಹೇಳುವುದಾದರೆ ಬಡತನದ ನಿಜವಾದ ಕಾರಣ ಸಾಗುವಳಿಕೆಯ ಬಗ್ಗೆ ಸರಿಯಾದ ತಿಳುವಳಿಕೆ ಇಲ್ಲದೇ ಇರುವುದಲ್ಲ; ಬದಲಾಗಿ ಸಮಾಜದಲ್ಲಿಯ ಶೋಷಣೆಯ ವ್ಯವಸ್ಥೆ. ಈ ಶೋಷಣೆಯ ವ್ಯವಸ್ಥೆಯ ಬೇರೆ ಬೇರೆ ಬೇರುಗಳನ್ನು ಗಮನಿಸಿ (ಅರಿವು) ಅವನ್ನು ಕಿತ್ತುಹಾಕಲಿಕ್ಕೆ ಪ್ರಯತ್ನ ಮಾಡುವಾಗಲೇ ಅರಿವಿನ ಜಾಗೃತಿಯ ಉದಯ. ಆಗಲೇ ಅನಕ್ಷರಸ್ಥ ವಯಸ್ಕರಿಗೆ ಅಕ್ಷರ ಜ್ಞಾನದ ಬಗ್ಗೆ ಆಸಕ್ತಿ. ಆಗಲೇ ಶಿಕ್ಷಣಕ್ಕೂ ತಮ್ಮ ಜೀವನಕ್ಕೂ ಇರುವ ಅನ್ಯೋನ್ಯ ಸಂಬಂಧದ ಮನವರಿಕೆ. ಇಲ್ಲಿ ಪ್ರತಿಯೊಂದು ಹಂತದಲ್ಲೂ ಸಂವಾದವು ಮುಖ್ಯವಾಗಿದ್ದು, ಅನಕ್ಷರಸ್ಥ ವಯಸ್ಕರೇ ತಮ್ಮ ಪ್ರತಿಯೊಂದು ಸಮಸ್ಯೆಯನ್ನು ತಿಳಿಯುವುದರಲ್ಲೂ ಬಗ

ಹರಿಸುವುದರಲ್ಲೂ ಪ್ರಮುಖ ಪಾತ್ರ ವಹಿಸುತ್ತಾರೆ. ಸಮಸ್ಯೆಯ ವಿಶ್ಲೇಷಣೆ ಕೇವಲ ವಿವೇಚನೆ (reflection) ಗೆ ಸೀಮಿತವಾಗಿರದೇ ಅದು ಕಾರ್ಯರೂಪ (action) ಕ್ಕೆ ಇಳಿಯುವುದೇ ಅರಿವಿನ ಜಾಗೃತಿ (conscientization = action-reflection-action = word-work = praxis) ಯ ವೈಶಿಷ್ಟ್ಯ.

## ಪ್ರಸ್ತುತ ಪುಸ್ತಕದ ಬಗ್ಗೆ

ಅರಿವಿನ ಜಾಗೃತಿಯ (ಅಥವಾ ಅರಿವು ಮೂಡಿಸುವಿಕೆ ಅಥವಾ ಜಾಗೃತೀಕರಣ) ಕಲ್ಪನೆ ಕೇವಲ ಸಾಕ್ಷರತೆ ಮತ್ತು ಕಾರ್ಯಾತ್ಮಕತೆಗಿಂತ ಭಿನ್ನವಾಗಿದ್ದು, ವಯಸ್ಕರ ಶಿಕ್ಷಣದಲ್ಲಿ ಅದರ ಮಹತ್ವವನ್ನು ನಾವು ತಿಳಿದುಕೊಳ್ಳಬೇಕಾಗಿದೆ. ಈ ಕಲ್ಪನೆಯ ಬಗ್ಗೆ ಆಳವಾದ ಆಲೋಚನೆ ಮಾಡಿ, ಅದಕ್ಕೆ ಒಂದು ಕ್ರಮವನ್ನು ಸಿದ್ಧಪಡಿಸಿ, ಅದನ್ನು ಬಳಕೆಗೆ ತಂದವರು ಬ್ರೆಝಿಲ್ ದೇಶದ ಶಿಕ್ಷಣತಜ್ಞರಾದ ಪಾಉಲೊ ಫ್ರೇರೆಯವರು. ಅವರ ಜೀವನದ ಪರಿಚಯವನ್ನೂ ಅವರ ತತ್ವಜ್ಞಾನದ ಕೆಲವು ಮುಖ್ಯ ಅಂಶಗಳನ್ನೂ ಹಾಗೂ ಅವರು ಸಿದ್ಧಪಡಿಸಿದ ಶಿಕ್ಷಣಕ್ರಮದ ರೂಪರೇಷೆಗಳನ್ನೂ ಆದಷ್ಟು ಸಂಕ್ಷಿಪ್ತವಾಗಿಯೂ ಸ್ಪಷ್ಟವಾಗಿಯೂ ಸರಳವಾಗಿಯೂ ವಿವರಿಸುವುದೇ ಈ ಪುಸ್ತಕದ ಮೊದಲ ಪ್ರಬಂಧದ ಉದ್ದೇಶ. ಎರಡನೆಯ ಪ್ರಬಂಧದಲ್ಲಿ ಫ್ರೇರೆಯವರ ಶಿಕ್ಷಣಕ್ರಮದ ತತ್ವಗಳನ್ನು ಮತ್ತು ರೂಪರೇಷೆಗಳನ್ನು ಕನ್ನಡಕ್ಕೂ ಕರ್ನಾಟಕದ ಪರಿಸ್ಥಿತಿಗೂ ಅಳವಡಿಸಿ ಅರಿವಿನ ಜಾಗೃತಿಯನ್ನು ಹೇಗೆ ನಡೆಸಿಕೊಡಬಹುದು ಎಂಬುದರ ಬಗ್ಗೆ ವಿವೇಚನೆ ಇದೆ.

## ಪೂರಕ ಪುಸ್ತಕಗಳ ಯೋಜನೆ

ಪ್ರಸ್ತುತ ಪುಸ್ತಕದ ಎರಡು ಪ್ರಬಂಧಗಳು ಅರಿವಿನ ಜಾಗೃತಿಯನ್ನು ಕಾರ್ಯರೂಪಕ್ಕೆ ತರಲು ಬೇಕಾದ ಸೈದ್ಧಾಂತಿಕ ಹಿನ್ನೆಲೆಯನ್ನು ಒದಗಿಸುತ್ತವೆ. ಇದಕ್ಕೆ ಪೂರಕವಾಗಿ ಇನ್ನೆರಡು ಕಿರುಹೊತ್ತಿಗೆಗಳನ್ನು ಬೆಳಕಿಗೆ ತರುವ ಯೋಜನೆ ಇದೆ. ಒಂದು ಪ್ರೇರಕ (animator) ರಿಗೆ ಕೈಪಿಡಿಯಂತಿದ್ದು, ಅದರಲ್ಲಿ ಅರಿವಿನ ಜಾಗೃತಿ ನಡೆಯುವಲ್ಲಿ ಚರ್ಚಾಕೂಟಗಳನ್ನು ಮುಂದುವರಿಸಿಕೊಂಡು ಹೋಗಲು ಬೇಕಾದ ಮಾರ್ಗಸೂಚಿಗಳಿರುವುವು. ಮುಖ್ಯವಾಗಿ ಜನರ ವಿಚಾರ (generative themes) ಗಳನ್ನು ಸೂಚಿಸುವ ಹದಿನೇಳು ಸೂತ್ರ (code) ಗಳು ಮತ್ತು ಕನ್ನಡ ಅಕ್ಷರಜ್ಞಾನಕ್ಕೆ ಅಗತ್ಯವೆನಿಸಿದ ಅಕ್ಷರಪಟಗಳು ಅದರಲ್ಲಿ ಇರುವುವು.

ಮೂರನೇ ಹೊತ್ತಿಗೆಯಲ್ಲಿ ಪ್ರತಿಯೊಂದು ಜನಕವಿಚಾರದ ಬಗ್ಗೆ ಸಾಮಾಜಿಕ ವಿಶ್ಲೇಷಣೆ, ಅಗತ್ಯವಿದ್ದ ಅಂಕಿ ಅಂಶಗಳು ಮತ್ತು ಜನಕವಿಚಾರಗಳೊಡನೆ ಸಂಬಂಧ ವಿರುವ ಬೇರೆ ಪೂರಕ ವಿಚಾರಗಳ ವಿಶ್ಲೇಷಣೆ ಇವೆಲ್ಲಾ ವಿವರಗಳನ್ನು ಪೂರೈಸುವ ಉದ್ದೇಶವಿದೆ. ಈ ವಿವರಗಳು ಮುಖ್ಯವಾಗಿ ವಯಸ್ಕರ ಚರ್ಚೆಗೆ ಪೂರಕವಾಗಿ ಬಂದು ಅವರ ತಿಳುವಳಿಕೆಗೆ ವೈಜ್ಞಾನಿಕ ವಿಶ್ಲೇಷಣೆಯ ಲೇಪವನ್ನು ಕೊಡುವಂತಿರುವುವು.

## ಕೃತಜ್ಞತೆ

ಈ ಕಿರುಹೊತ್ತಿಗೆಯನ್ನು ಬೆಳಕಿಗೆ ತರಲು ಹಲವರು ನೆರವಾಗಿದ್ದಾರೆ. ಇದರ ಕರಡುಪ್ರತಿಗಳನ್ನು ಓದಿ ಸಲಹೆಗಳನ್ನು ನೀಡಿದ ಮತ್ತು ಭಾಷಾದೋಷಗಳನ್ನು ತಿದ್ದಿದ ಪ್ರೊ॥ ರಾಜೀವ ಮತ್ತು ಶ್ರೀ ಎಸ್. ಆರ್. ರಾಮಸ್ವಾಮಿಯವರಿಗೆ ನಾನು ಆಭಾರಿ ಯಾಗಿದ್ದೇನೆ. ತಮ್ಮ ಸಲಹೆಗಳೊಡನೆ ಉತ್ತೇಜನಕಾರಿಯಾದ 'ಮೊದಲ ಮಾತ'ನ್ನು ಬರೆದು ಸಹಕರಿಸಿದ ಮಿತ್ರ ರೂಪರ್ಟ್‌ನವರಿಗೂ ಮುಖಪುಟದ ಚಿತ್ರವನ್ನು ಬರೆದ ಶ್ರೀ ಮಂಗಿಮ್ಮೆ ಪ್ರಕಾಶಮ್ ಹಾಗೂ ಈ ಪುಸ್ತಕವನ್ನು ಅಂದವಾಗಿ ಮುದ್ರಿಸಿದ ಆರ್ಕೆ ಎಂಟರ್‌ಪ್ರೈಸಸ್ ಸಂಸ್ಥೆಗೂ ನನ್ನ ಕೃತಜ್ಞತೆಗಳು.

ತಾ॥ 1-5-1986 ವಿ. ಬ. ಕಿರಣ ಕಮಲ ಪ್ರಸಾದ

ಆನೇಕಲ್

# ಎರಡನೇ ಆವೃತ್ತಿ

ಎರಡನೇ ಆವೃತ್ತಿ ಹೆಚ್ಚಿನಂಶ ಮೊದಲನೇ ಆವೃತ್ತಿಯ ಹಾಗೇ ಇದೆ. ಕೆಲವು ಪದಗಳನ್ನು ಬದಲಾಯಿಸಿ ಸೂಕ್ತ ಶಬ್ದಗಳನ್ನು ಬಳಸಲಾಗಿದೆ. ಮುಖ್ಯವಾಗಿ 'ದಲಿತ' ಶಬ್ದದ ಬದಲು 'ದಮಿತ' ಪದವನ್ನು ಉಪಯೋಗಿಸಲಾಗಿದೆ. 'ದಮಿತ' ಶಬ್ದವನ್ನು ಮೊದಲಬಾರಿ 'ಕಲಿಯುವವನ ಸಂಗಾತಿ' ಪುಸ್ತಕದ ಹೊರಕವಚದ ಹಿಂಭಾಗದಲ್ಲಿ ಉಲ್ಲೇಖಿಸಿರುವ ಫ್ರೇರೆಯ ವಾಕ್ಯಗಳಲ್ಲಿ, 'ಹತ್ತಿಕ್ಕಿದವರು' ಅಥವಾ ಆಂಗ್ಲಭಾಷೆಯ 'oppressed' ಪದಕ್ಕೆ ಸಮಾನಾರ್ಥಕವಾಗಿ ಬಳಸಲಾಗಿತ್ತು. ಅದೇ ಅರ್ಥದಲ್ಲಿ ಇಲ್ಲಿಯೂ ಬಳಸಲಾಗಿದೆ. 'ದಲಿತ' ಪದಕ್ಕೆ ಜಾತಿವ್ಯವಸ್ಥೆಯಿಂದಾಗುವ ದಮನದ ಅರ್ಥ ಬಂದರೆ, 'ದಮಿತ' ಪದಕ್ಕೆ ಜಾತಿವ್ಯವಸ್ಥೆಯ ದಮನವನ್ನು ಒಳಗೊಂಡು ಎಲ್ಲಾ ರೀತಿಯ ದಮನಗಳಿಗೂ ಅರ್ಥ ಕೊಡುತ್ತದೆ ಎಂಬ ದೃಷ್ಟಿಯಿಂದ ಪ್ರಯೋಗಿಸಲಾಗಿದೆ.

**ಪೂರಕ ಪುಸ್ತಕಗಳು :**

ಮೊದಲು ಯೋಜಿಸಿದ ಎರಡು ಮತ್ತು ಮೂರನೇ ಹೊತ್ತಿಗೆಗಳಲ್ಲಿ ಎರಡನೇ ಹೊತ್ತಿಗೆ ಈಗಾಗಲೇ ೨ನೇ ಆವೃತ್ತಿ ಕಂಡಿದ್ದು, ಮೂರನೇ ಹೊತ್ತಿಗೆಯನ್ನು ಇನ್ನೂ ಸಿದ್ಧಪಡಿಸಲಾಗಿಲ್ಲ. ಯೋಜಿಸಿದ ಪುಸ್ತಕಕ್ಕಿಂತ ಭಿನ್ನವಾದ 'ಕಲಿಯುವವನ ಸಂಗಾತಿ'ಯನ್ನು ಮೂರನೇ ಭಾಗವಾಗಿ ೧೯೮೯ರಲ್ಲಿ ಪ್ರಕಟಿಸಲಾಗಿತ್ತು.

ಈ ಆವೃತ್ತಿಯನ್ನು ಅಂದವಾಗಿ ಮುದ್ರಿಸಿದ ಪಲ್ಲವಿ ಮುದ್ರಣಾಲಯದವರಿಗೆ ನನ್ನ ಕೃತಜ್ಞತೆಗಳು.

ಕಿರಣ ಕಮಲ ಪ್ರಸಾದ

೩೦, ಜನವರಿ ೧೯೯೧
ಗುಡ್ಡಹಟ್ಟಿ, ಅತ್ತಿಬೆಲೆ ೫೬೨ ೧೦೭

# ಹತ್ತಿಕ್ಕಿದವರ ಶಿಕ್ಷಣಕ್ರಮ - ಅರಿವಿನ ಜಾಗೃತಿ

ಅನಕ್ಷರಸ್ಥ ದಮಿತ ವಯಸ್ಕರನ್ನು ಅತ್ಯಂತ ಸುಲಭವೂ ಅರ್ಥಪೂರ್ಣವೂ ಆದ ರೀತಿಯಲ್ಲಿ ಸಾಕ್ಷರರನ್ನಾಗಿ ಮಾಡುವ ಪಾಉಲೊ ಫ್ರೇಇರೆಯು ರೂಪಿಸಿದ ಶಿಕ್ಷಣ ಕ್ರಮದ ರೂಪರೇಷೆಗಳನ್ನು ವಿವರಿಸುವ ಉದ್ದೇಶ ಈ ಪ್ರಬಂಧದ್ದು. ಇದರಲ್ಲಿ ಐದು ಪ್ರಮುಖ ಭಾಗಗಳಿವೆ. ಫ್ರೇಇರೆಯುವರ ಶಿಕ್ಷಣಕ್ರಮವನ್ನು ವಿವರಿಸುವ ಭಾಗಗಳಿಗೆ (ಭಾಗ 3 ಮತ್ತು 4) ಹಿನ್ನೆಲೆಯಾಗಿ ಫ್ರೇಇರೆಯುವರ ಜೀವನದ ಕೆಲವು ಮುಖ್ಯ ಸಂಗತಿಗಳನ್ನು ಒಂದನೇ ಭಾಗದಲ್ಲಿ ಕೊಟ್ಟಿದೆ. ಅವರು ತಮ್ಮ ಶಿಕ್ಷಣಕ್ರಮವನ್ನು ರೂಪಿಸಲು ಅಳವಡಿಸಿದ ತತ್ವಜ್ಞಾನದ ವಿವರಣೆ ಎರಡನೇ ಭಾಗದಲ್ಲಿ ಬರುತ್ತದೆ. ಐದನೇ ಭಾಗದಲ್ಲಿ ಫ್ರೇಇರೆಯ ಶಿಕ್ಷಣಕ್ರಮದ ಸಾಧ್ಯಾಸಾಧ್ಯತೆಗಳ ಬಗ್ಗೆ ವಿವೇಚನೆ ಇದೆ. ಎರಡನೇ ಭಾಗದಲ್ಲಿ ಬರುವ ವಿಚಾರಗಳನ್ನು ಫ್ರೇಇರೆಯುವರ "ಹತ್ತಿಕ್ಕಿದವರ ಶಿಕ್ಷಣಕ್ರಮ" (Pedagogy of the Oppressed) ಎಂಬ ಪುಸ್ತಕದಿಂದ ಆರಿಸಿದ್ದಾಗಿದೆ. 3ನೇ ಭಾಗದ ವಿಚಾರಗಳಿಗೆ ಆಧಾರ ಅದೇ ಪುಸ್ತಕದ 3ನೇ ಅಧ್ಯಾಯ ಮತ್ತು ಅವರ ಇನ್ನೊಂದು ಪುಸ್ತಕ 'ಸ್ವಾತಂತ್ರ್ಯಕ್ಕೋಸ್ಕರ ಸಾಂಸ್ಕೃತಿಕ ಕಾರ್ಯ' (Cultural Action for Freedom)ದ ಅನುಬಂಧ. 4ನೇ ಭಾಗವು ಅದೇ ಅನುಬಂಧದಿಂದ ಪ್ರಭಾವಿತಗೊಂಡಿದೆ.

## 1. ಪಾಉಲೊ ಫ್ರೇಇರೆಯ ಕಿರುಪರಿಚಯ

1.0 ಸಾಕ್ಷರತೆ ಮತ್ತು ಅರಿವಿನ ಜಾಗೃತಿಗೆ ಸಂಬಂಧ ಕಲ್ಪಿಸುವಲ್ಲಿ ಪಾಉಲೊ ಫ್ರೇಇರೆಯು ವಿಶೇಷ ಪ್ರಯತ್ನ ನಡೆಸಿದ್ದಾನೆ. ಒಬ್ಬ ವ್ಯಕ್ತಿಯ ವಿಚಾರಗಳು ಅವನ ಅನುಭವಕ್ಕೆ ನೇರವಾಗಿ ಸಂಬಂಧಿಸಿರುತ್ತವೆ. ಆದ್ದರಿಂದ ಫ್ರೇಇರೆಯ ವಿಚಾರಗಳನ್ನು ಅರ್ಥಮಾಡಿಕೊಳ್ಳುವ ಮೊದಲು ಅವನ ಕೆಲವು ಅನುಭವಗಳನ್ನು ನೆನಸೋಣ.

1.1 ಪಾಉಲೊರವರು 1921ರಲ್ಲಿ ಮಧ್ಯಮವರ್ಗದ ಕುಟುಂಬವೊಂದರಲ್ಲಿ ಜನಿಸಿದರು. ಪೋಲೀಸ್ ಅಧಿಕಾರಿಯಾಗಿದ್ದ ಅವನ ತಂದೆ ಪಾಉಲೊ ಚಿಕ್ಕವನಿರುವಾಗಲೇ ತೀರಿದರು. ಆದ್ದರಿಂದ ಆತನಿಗೆ ತನ್ನ ಶಿಕ್ಷಣವನ್ನು ಅಷ್ಟು ಸುಲಭವಾಗಿ ಮುಂದುವರಿಸಲಾಗಲಿಲ್ಲ. ಮಹಾವಿದ್ಯಾಲಯದಲ್ಲಿ ಕಲಿಯುವಾಗ ಚಿಕ್ಕ

ಶಾಲೆಯೊಂದರಲ್ಲಿ ಅಧ್ಯಾಪಕರಾಗಿ ದುಡಿಯಬೇಕಾಯಿತು. ಕಾನೂನು ಶಿಕ್ಷಣದಲ್ಲಿ ತರಬೇತಿ ಪಡೆದು ಕೆಲಕಾಲ ವಕೀಲರಾಗಿ ಕೆಲಸ ಮಾಡಿದರು. ಆದರೆ ಆ ಕೆಲಸ ಹಿಡಿಸಲಿಲ್ಲ. ಚಿಕ್ಕಂದಿನಲ್ಲೇ ಬಡತನದ ಅನುಭವವಾದ್ದರಿಂದ ಬಡಜನರ ಏಳ್ಗೆಗೆ ದುಡಿಯುವ ಹಂಬಲವಾಗಿತ್ತು. ಆದ್ದರಿಂದ ಬಡಜನರಿಗೆ ಶಿಕ್ಷಣ ಕೊಡುವ ಸಂಘಟನೆಯೊಂದರಲ್ಲಿ ಕೆಲಸ ಮಾಡತೊಡಗಿದರು.

1.2.1 ರೆಸಿಪಿ ವಿಶ್ವವಿದ್ಯಾಲಯದಲ್ಲಿ ಒಕ್ಕಲಿಗರಿಗೆ ಪ್ರಾಥಮಿಕ ಸ್ವರೂಪದ ಶಿಕ್ಷಣ ಕೊಡುವ ಚಟುವಟಿಕೆಯಲ್ಲಿ ಫ್ರೀರೆಯುವರು ಭಾಗವಹಿಸಿದರು. ಆಗ ರೆಸಿಪಿ ನಗರದಲ್ಲಿ ಅನಕ್ಷರಸ್ಥರ ಪ್ರಮಾಣ 100ಕ್ಕೆ 70ರಷ್ಟು ಇತ್ತು. ಇಷ್ಟರವರೆಗೆ ಮಾಡಿದ ಸಾಕ್ಷರತೆಯ ಎಷ್ಟೋ ಪ್ರಯತ್ನಗಳು ವಿಫಲವಾಗಿದ್ದುವು. ಜನರನ್ನು 30–40 ತಾಸುಗಳಲ್ಲಿ ಸಾಕ್ಷರರನ್ನಾಗಿ ಮಾಡುವ ಸುಲಭ ರೀತಿಯ ಪ್ರಯೋಗ ಒಂದರಲ್ಲಿ ಪಾಉಲೋರವರು ತೊಡಗಿದರು. ಈ ಬಗ್ಗೆ 15 ವರ್ಷ ಸತತ ಪ್ರಯತ್ನ ನಡೆಸಿ, ಅವುಗಳ ಮೇಲೊಂದು ಪ್ರಬಂಧ ಬರೆದು ರೆಸಿಪಿ ವಿಶ್ವವಿದ್ಯಾಲಯ ದಿಂದ ಡಾಕ್ಟರೇಟ್ ಪದವಿ ಪಡೆದರು. ತಮ್ಮ ಪ್ರಬಂಧದಲ್ಲಿ–ವಯಸ್ಕರಿಗೆ ಭಾಷೆಯ ಜ್ಞಾನದ ಅಭಾವ ಇಲ್ಲ; ಆದ್ದರಿಂದ ಅವರ ಆಸಕ್ತಿ ಕುದುರಿಸಿ ಕಲಿಸುವುದರಿಂದ ತಮ್ಮ ಸಮಸ್ಯೆಗಳನ್ನು ವ್ಯಕ್ತಪಡಿಸಿ ಪರಿಹಾರ ಮಾಡಬಹುದೆಂದು ಮನದಟ್ಟಾದರೆ ಕೆಲವೇ ವೇಳೆಯಲ್ಲಿ ಅವರು ಓದಲು ಬರೆಯಲು ಕಲಿಯುವರು – ಎಂದು ತೋರಿಸಿದರು.

1.2.2 ಡಾಕ್ಟರೇಟ್ ಪದವಿ ಗಳಿಸಿದ ಮೇಲೆ ಪಾಉಲೋರವರು ಅದೇ ವಿಶ್ವ ವಿದ್ಯಾಲಯದಲ್ಲಿ ಶಿಕ್ಷಣದ ಇತಿಹಾಸ ಮತ್ತು ತತ್ವಜ್ಞಾನದ ಪ್ರಾಧ್ಯಾಪಕರಾದರು. ವಿಶ್ವವಿದ್ಯಾಲಯಗಳು ಕಲಿತವರ ಕೈಗೊಂಬೆಯಾಗಿರದೇ ಸಾಮಾನ್ಯ ಜನರ ಶೈಕ್ಷಣಿಕ ಕೇಂದ್ರವಾಗಬೇಕೆಂಬುದರ ಬಗ್ಗೆ ಕಾಳಜಿ ವಹಿಸಿದರು. ಮನುಷ್ಯ ಮತ್ತು ಪ್ರಾಣಿ, ಪ್ರಕೃತಿ ಮತ್ತು ಸಂಸ್ಕೃತಿ ಇವುಗಳಲ್ಲಿಯ ಭೇದ ತೋರಿಸುವುದರ ಮೂಲಕ ಓದು ಬರಹ ಒಂದು ಶಕ್ತಿ; ತಮ್ಮ ದುಃಖಕ್ಕೆ ಕಾರಣ ದೇವರ ಇಚ್ಛೆ ಅಲ್ಲ; ತಮ್ಮ ಸಮಸ್ಯೆಗಳನ್ನು ಹೆಚ್ಚಿನ ಜ್ಞಾನದ ಮೂಲಕ ಪರಿಹಾರ ಮಾಡಬಹುದು ಎಂಬುದನ್ನು ಮನದಟ್ಟಾಗಿಸಿ ಓದು ಬರಹ ಕಲಿಯುವಂತೆ ಪ್ರೇರಣೆ ಬರುವಲ್ಲಿ ಪ್ರಯೋಗ ನಡೆಸಿ ದರು.

1.2.3 ಬ್ರೆಝಿಲ್ ದೇಶದಲ್ಲಿ ಒಕ್ಕಲಿಗರ ಚಳುವಳಿಯಾಗಿ, 1963ರಲ್ಲಿ ಪಾಉಲೊ ಫ್ರೀರೆಯುವರ ಶಿಕ್ಷಣ ಪದ್ಧತಿಯನ್ನು ರಾಜ್ಯಾದ್ಯಂತ ಅಳವಡಿಸುವ

ಯೋಜನೆ ರೂಪಿತವಾಯಿತು. ಫ್ರೀರೆಯವರು ಶಿಕ್ಷಣ ಖಾತೆಯ ಕಾರ್ಯದರ್ಶಿಯಾಗಿಯೂ, ರಾಷ್ಟ್ರಮಟ್ಟದ ವಯಸ್ಕರ ಶಿಕ್ಷಣ ಯೋಜನೆಯ ಸಾಮಾನ್ಯ ಸಂಯೋಜಕ (General Co-ordinator) ರಾಗಿಯೂ ನೇಮಕಗೊಂಡರು. 8 ತಿಂಗಳುಗಳಲ್ಲಿ ಸಾವಿರಾರು ಸ್ವಯಂಸೇವಕ / ಸಂಯೋಜಕ (Volunteer / Co-ordinator)ರನ್ನು ತರಬೇತಿಪಡಿಸಲಾಯಿತು. 1964ರೊಳಗೆ 20,000 ಚರ್ಚಾಕೂಟ (Discussion Group) ಗಳನ್ನು ನಡೆಸಿ 20 ಲಕ್ಷ ಜನರನ್ನು 3 ತಿಂಗಳುಗಳೊಳಗೆ ಸಾಕ್ಷರರನ್ನಾಗಿ ಮಾಡುವ ಯೋಜನೆ ಇತ್ತು. ಉಳಿದ 400 ಲಕ್ಷ (ದೇಶದ ಸುಮಾರು ಅರ್ಧ ಜನರು) ಅನಕ್ಷರಸ್ಥರನ್ನು ಮುಂದಿನ ಕೆಲವೇ ವರ್ಷಗಳಲ್ಲಿ ಸಾಕ್ಷರರನ್ನಾಗಿ ಮಾಡುವ ಉಜ್ವಲ ಧೋರಣೆ ಇತ್ತು.

1.2.4 ಆದರೆ 1964ರಲ್ಲಿ ನಡೆದ ಸೈನಿಕ ಕ್ರಾಂತಿ ಈ ಯೋಜನೆಯನ್ನು ಬುಡಮೇಲು ಮಾಡಿತು. ವಯಸ್ಕರ ಶಿಕ್ಷಣ ಯೋಜನೆ ರದ್ದುಗೊಳಿಸಲ್ಪಟ್ಟು ಫ್ರೀರೆಯವರನ್ನು ಕೆಲಕಾಲ ಬಂಧಿಸಿ ದೇಶದಿಂದ ಹೊರಗೆ ಹಾಕಲಾಯಿತು.

1.3 ಚಿಲಿ ದೇಶವು ಫ್ರೀರೆಯವರಿಗೆ ಸ್ವಾಗತ ನೀಡಿ ಅವರ ಶಿಕ್ಷಣ ಪದ್ಧತಿಯನ್ನು ಅಳವಡಿಸಿತು. 1974ರೊಳಗೆ ಅನಕ್ಷರಸ್ಥರ ಪ್ರಮಾಣವನ್ನು 100ರಲ್ಲಿ 5 ರಷ್ಟಕ್ಕೆ ಇಳಿಸುವ ಯೋಜನೆ ಹಾಕಲ್ಪಟ್ಟಿತು. ದಕ್ಷಿಣ ಅಮೇರಿಕಾದ ಉಳಿದ ದೇಶಗಳೂ ಫ್ರೀರೆಯವರ ಶಿಕ್ಷಣಕ್ರಮಕ್ಕೆ ಪ್ರೋತ್ಸಾಹ ನೀಡಿದವು. ಫ್ರೀರೆಯವರ ಶಿಕ್ಷಣ ಕ್ರಮವು ಈಗ ವಿಶ್ವದಾದ್ಯಂತ ಗೌರವಿಸಲ್ಪಟ್ಟಿದೆ. ಹಿಂದುಳಿದ ರಾಷ್ಟ್ರಗಳಲ್ಲಿಯ ಅನಕ್ಷರಸ್ಥ ವಯಸ್ಕರನ್ನು ಸುಲಭ ರೀತಿಯಲ್ಲಿ ಸಾಕ್ಷರರನ್ನಾಗಿ ಮಾಡುವ ಸಾಧನವನ್ನು ಫ್ರೀರೆಯವರು ಕಲ್ಪಿಸಿದ್ದಾರೆ ಎಂಬುದರಲ್ಲಿ ಸಂಶಯವಿಲ್ಲ.

## 2. ಫ್ರೀರೆಯವರ ಶೈಕ್ಷಣಿಕ ತತ್ವಜ್ಞಾನ

2.0 ತತ್ವಜ್ಞಾನವೆಂದರೆ ಒಂದು ವಿಷಯದ ಬಗ್ಗೆ ಒಬ್ಬನಿಗಿರುವ ಕೆಲವು ನಿರ್ದಿಷ್ಟ ವಿಚಾರಗಳು. ಫ್ರೀರೆಯ ಶಿಕ್ಷಣ ಪದ್ಧತಿಯನ್ನು ಅರ್ಥಮಾಡಿಕೊಳ್ಳಲು ಆ ಪದ್ಧತಿಯ ಹಿಂದಿರುವ ಅವರ ತತ್ವಜ್ಞಾನ ತಿಳಿದುಕೊಳ್ಳುವುದು ಅವಶ್ಯಕ.

2.1.1 ಸಂಪೂರ್ಣ ಮಾನವೀಯತೆಯನ್ನು ಪಡೆಯುವುದು (ಮಾನವೀಕರಣ) ಮನುಷ್ಯನನ್ನು ಯಾವಾಗಲೂ ಕಾಡುತ್ತಿದ್ದ ಬಹು ಮುಖ್ಯ ಸಮಸ್ಯೆ. ಈಗಲೂ ಅದು ಸಾಧಿಸಬೇಕಾದ ಮುಖ್ಯ ಗುರಿಯಾಗಿ ಪರಿಣಮಿಸಿದೆ. ಮಾನವೀಕರಣದ ಬಗ್ಗೆ

ಕಾಳಜಿ ಇಷ್ಟೊಂದು ಗಾಢವಾಗಲಿಕ್ಕೆ ಕಾರಣ ಅಮಾನವೀಯಂತೆ ಎಲ್ಲೆಲ್ಲೂ ಕಂಡು ಬರುವ ವಾಸ್ತವ ಸಂಗತಿ ಆಗಿದೆ. ಮಾನವೀಯಂತೆ ಮತ್ತು ಅಮಾನವೀಯಂತೆ ಎರಡೂ ಮನುಷ್ಯನ ಮುಂದಿರುವ ಸಾಧ್ಯತೆಗಳು. ಮನುಷ್ಯ ಮಾನವನಾಗ ಬಹುದು ಅಥವಾ ಅಮಾನವನಾಗಬಹುದು. ಮಾನವೀಯಂತೆ ಮಾತ್ರ ಅವನ ಗುರಿ. ಆದರೆ ಹಲವಾರು ರೀತಿಗಳಲ್ಲಿ ಮನುಷ್ಯ ಆ ಗುರಿಯಿಂದ ವಂಚಿತನಾಗುವಂತಿದೆ. ಮಾನವನಾಗುವ ಗುರಿ ಹತ್ತಿಕ್ಕುವವರ ಅನ್ಯಾಯ, ಶೋಷಣೆ, ದಮನ, ಹಿಂಸೆಗಳಿಂದ ಹಿಮ್ಮೆಟ್ಟಿಸುವಂತಿದೆ. ಆದರೆ ಹತ್ತಿಕ್ಕಿದವರು ನ್ಯಾಯ ಮತ್ತು ಸ್ವಾತಂತ್ರ್ಯಕ್ಕೋಸ್ಕರ ಪಡುವ ಹಾತೊರೆಯುವಿಕೆಯಿಂದ ಹಾಗೂ ತಮ್ಮಿಂದ ದೂರವಾಗಿದ್ದ ಮಾನವೀ ಯಂತೆಯನ್ನು ಪುನಃ ಸಂಪಾದಿಸಲು ಅವರು ಮಾಡುವ ಹೋರಾಟಗಳಿಂದ ಮಾನವೀ ಕರಣದ ಬಯಕೆ ಇನ್ನೂ ವೃದ್ಧಿಸುವಂತಿದೆ.

2.1.2 ಅಮಾನವೀಕರಣದ ಮುಖ್ಯ ಕುರುಹುಗಳು ಹೀಗಿವೆ. ಜಗತ್ತಿನ ಮಟ್ಟದಲ್ಲಿ ಕೆಲ ಶಕ್ತಿಯುತ ರಾಷ್ಟ್ರಗಳು ಇತರ ರಾಷ್ಟ್ರಗಳ ಮೇಲೆ ಅಧಿಕಾರ ನಡೆ ಸುತ್ತಿವೆ. ಕೆಲವು ಬಲಿಷ್ಠ ರಾಷ್ಟ್ರಗಳು ಹಲವು ಬಡ ದೇಶಗಳ ಆರ್ಥಿಕ ಹಾಗೂ ರಾಜಕೀಯ ವ್ಯವಸ್ಥೆಗಳಲ್ಲಿ ಹಸ್ತಕ್ಷೇಪ ಮಾಡುತ್ತವೆ. ಒಂದೇ ರಾಷ್ಟ್ರದಲ್ಲಿ ಒಂದು ಬಲಿಷ್ಠ ಗುಂಪು ಉಳಿದ ಗುಂಪುಗಳ ಮೇಲೆ ಅಧಿಕಾರ ನಡೆಸುತ್ತದೆ. ಒಂದು ಸಣ್ಣ ವರ್ಗ ದೇಶದ ಸಂಪನ್ಮೂಲ ಮತ್ತು ಆದಾಯಗಳನ್ನು ತನ್ನಲ್ಲಿ ಕೇಂದ್ರೀಕರಿಸಿದರೆ ಆ ದೇಶದ ಬಹು ದೊಡ್ಡ ವರ್ಗ ಬಡತನದಲ್ಲಿ ತೊಳಲಾಡುತ್ತದೆ. ಈ ದಬ್ಬಾಳಿಕೆಗಳ ಪರಿಣಾಮವಾಗಿ ಶ್ರೀಮಂತ ದೇಶ ಹಾಗೂ ಶ್ರೀಮಂತ ಜನರ ಸಂಸ್ಕೃತಿ ತನ್ನ ವರ್ಚ ಸ್ಸನ್ನು ಬಡದೇಶಗಳು ಮತ್ತು ಬಡ ಜನರ ಮೇಲೆ ಬೀರುತ್ತದೆ. ಬಲಿಷ್ಠ ದೇಶದ ಮತ್ತು ಶ್ರೀಮಂತನ ಸಂಸ್ಕೃತಿಯೇ ಆಕ್ರಮ ನಡೆಸುವ ಪ್ರಚಾರಿ ಸಂಸ್ಕೃತಿ. ತೆಪ್ಪ ಗಿರುವ ಬಹುಸಂಖ್ಯಾತರ ಸಂಸ್ಕೃತಿ ಮೂಕ ಸಂಸ್ಕೃತಿ. ಯೋಚನೆಗೀಡುಮಾಡುವ ಮತ್ತೊಂದು ಸಂಗತಿಯೆಂದರೆ ಹತ್ತಿಕ್ಕಿದ ರಾಷ್ಟ್ರ ಅಥವಾ ಗುಂಪುಗಳಲ್ಲಿ ಕೆಲ ಜನರು ದಬ್ಬಾಳಿಕೆ ನಡೆಸುವ ರಾಷ್ಟ್ರ ಅಥವಾ ಗುಂಪಿನ ಸಂಸ್ಕೃತಿಯ ಅನುಕರಣೆಮಾಡಿ ಶೋಷಣೆ ಮಾಡುವ ಅಧಿಕಾರಿಗಳ ಹಸ್ತಕರಾಗುತ್ತಾರೆ. ತಮ್ಮದೇ ರಾಷ್ಟ್ರ ಅಥವಾ ಗುಂಪಿನ ದಮಿತರ ಶೋಷಣೆ ಮಾಡುವಲ್ಲಿ ಅಧಿಕಾರಿಗಳಿಗೆ ನೆರವಾಗುತ್ತಾರೆ.

2.1.3 ಅಮಾನವೀಯತೆ ಕೇವಲ ಹತ್ತಿಕ್ಕಿದವರ, ದಮಿತರ ಪ್ರಶ್ನೆಯಲ್ಲ. ಅದು ಹತ್ತಿಕ್ಕುವವರನ್ನೂ ಕಾಡುತ್ತದೆ. ಜಗತ್ತಿನ ಹಾಗೂ ದೇಶದಲ್ಲಿಯ ಆರ್ಥಿಕ, ಸಾಮಾಜಿಕ, ರಾಜಕೀಯ ಅಸಮತೆಗಳಿಂದ ಎಲ್ಲಾ ಜನರ ಅಮಾನವೀಕರಣವಾಗು

ತ್ತದೆ. ಕೇವಲ ಮೂಕ ಸಂಸ್ಕೃತಿಯ ಬಹುಸಂಖ್ಯಾತರು ಅಮಾನವರಾಗಿರದೇ ಅಧಿಕಾರವರ್ಗದ ಅಲ್ಪಸಂಖ್ಯಾತರೂ ಅಮಾನವರು. ಉಳಿದ ಜನರು ತಮ್ಮ ಸುಖ ಭೋಗದ ಸಾಧನ; ಸಾಹಿತ್ಯ, ಕಲೆ, ವಿಜ್ಞಾನದ ಸವಲತ್ತುಗಳು ತಮ್ಮ ಸೊತ್ತು ಎಂಬ ತಪ್ಪು ತಿಳುವಳಿಕೆಗಳು ಅಧಿಕಾರವರ್ಗದವರಲ್ಲಿ ಇರುವವರೆಗೆ ಅವರು ಅಮಾನವರಾಗಿಯೇ ಉಳಿಯುತ್ತಾರೆ.

2.1.4 ಆದರೆ ಕಳೆದುಕೊಂಡ ಮಾನವೀಯತೆಯನ್ನು ಸಂಪಾದಿಸಲು ಕೇವಲ ಹತ್ತಿಕ್ಕಿದವರಿಂದಲೇ ಸಾಧ್ಯ. ತಮ್ಮನ್ನೂ ಹತ್ತಿಕ್ಕುವವರನ್ನೂ ವಿಮೋಚಿಸುವ ಮಂತ್ರ ಇರುವುದು ಹತ್ತಿಕ್ಕಿದವರ ಬಾಯಿಯಲ್ಲಿ. ಹತ್ತಿಕ್ಕುವವರು ತಾವು ನ್ಯಾಯ ಕೊಡುತ್ತೇವೆಂದು ಕೆಲವು ಉದಾರ ಕಾರ್ಯಗಳನ್ನು ಎಸಗಬಹುದು. ಆದರೆ ಅನ್ಯಾಯದ ವ್ಯವಸ್ಥೆಯನ್ನು ಬದಲಾಯಿಸದ ಈ ಕಾರ್ಯಗಳು ಕೇವಲ ಸುಳ್ಳು ಉದಾರತನವಲ್ಲದೇ ಬೇರೆಯಲ್ಲ.

ಹೀಗೆಂದ ಮೇಲೆ ಶೋಷಣೆ ನಡೆಸುವ ವರ್ಗದ ಕೆಲವರು ಶೋಷಿತ ವರ್ಗದ ಪರವಾಗಿ ಹೋರಾಡಲಿಕ್ಕೆ ಸಾಧ್ಯವಿಲ್ಲ ಎಂದು ಅರ್ಥ ಅಲ್ಲ. ಶೋಷಿತ ವರ್ಗದ ಪರವಾಗಿ ಹೋರಾಡುವುದೆಂದರೆ ಶೋಷಿತ ಜನರಲ್ಲಿ ಸಂಪೂರ್ಣ ವಿಶ್ವಾಸವಿಟ್ಟು, ಅವರೊಡನೆ, ಅವರ ಜೊತೆಯಲ್ಲಿ, ಅವರ ಹೋರಾಟದಲ್ಲಿ ಪಾಲ್ಗೊಳ್ಳುವುದು, ಅವರಿಗೋಸ್ಕರ, ಅವರ ಪರವಾಗಿ ಹೋರಾಡುವವರು ಇನ್ನೂ ಶೋಷಿತ ವರ್ಗಕ್ಕೆ ಸೇರಿದವರಾಗಿರುತ್ತಾರೆ.

2.1.5 ಅಮಾನವೀಕರಣದ ಕೆಲವು ಮುಖ್ಯ ಲಕ್ಷಣಗಳು ಈ ಕೆಳಗಿನಂತಿವೆ. ಅವರ ಮೊದಲ ಲಕ್ಷಣ ಸೋಲಿಸುವಿಕೆ (conquest). ಸೋಲಿಸುವಾಗ ಗೆದ್ದವನು ಸೋತವನನ್ನು ತನ್ನ ಅಧೀನನಾಗಿಸುತ್ತಾನೆ ಮತ್ತು ತನ್ನ ವಿಚಾರಗಳನ್ನು ಅವನ ಮೇಲೆ ಹೇರುತ್ತಾನೆ. ಸೋತವನು ಗೆದ್ದವನನ್ನು ಅನುಕರಿಸಿ ತನ್ನತನವನ್ನು ಕಳಕೊಂಡ ದ್ವಂದ್ವ ವ್ಯಕ್ತಿಯಾಗುತ್ತಾನೆ. ಶೋಷಣೆ ನಡೆಸುವವರ ಗುರಿ ಶೋಷಿತ ಜನರು ಕ್ರಿಯಾಶೂನ್ಯರಾಗಿ ಪ್ರಚಲಿತ ಪರಿಸ್ಥಿತಿಯನ್ನು ಹಾಗೆಯೇ ಮುಂದುವರಿಸ ಬೇಕೆಂಬುದು.

ಅಮಾನವೀಕರಣದ ಮತ್ತೊಂದು ಲಕ್ಷಣ ಹೀಗಿದೆ. ಶೋಷಣೆ ನಡೆಸುವ ಅಲ್ಪ ಪ್ರಮಾಣದ ವರ್ಗ ಶೋಷಿತ ಬಹುಸಂಖ್ಯೆಯ ಜನರನ್ನು ತನ್ನ ಅಧೀನ ದಲ್ಲಿಟ್ಟುಕೊಳ್ಳಲು ಅವರನ್ನು ಯಾವಾಗಲೂ ವಿಂಗಡಿಸಿ ಇಡಬೇಕು (divide &

rule). ಶೋಷಣೆ ನಡೆಸುವವರು ಜನರನ್ನು ಪ್ರತ್ಯೇಕಿಸುತ್ತಾರೆ. ಅವರ ಮಧ್ಯೆ ತಲೆದೋರುವ ಬಿರುಕುಗಳನ್ನು ಇನ್ನೂ ಬಲಗೊಳಿಸುತ್ತಾರೆ.

ಇನ್ನೊಂದು ಲಕ್ಷಣ ಕುತಂತ್ರ (manipulation). ಕುತಂತ್ರಗಳಿಂದ ಶೋಷಿತ ಜನರು ತಮ್ಮ ಗುರಿಗಳಿಗೆ ಯಾವಾಗಲೂ ಹೊಂದಿಕೊಳ್ಳುವಂತೆ ಶೋಷಿಸು ವವರು ನೋಡಿಕೊಳ್ಳುತ್ತಾರೆ. ವಾಸ್ತವ ಸಂಗತಿಗಳಿಂದ ದೂರವಾದ ಹಲವಾರು ಕಟ್ಟುಕತೆಗಳೇ ಅವರ ಕುಯುಕ್ತಿಯ ಪ್ರಬಲ ಸಾಧನಗಳು.

ಅಮಾನವೀಕರಣದ ಕೊನೆಯ ಲಕ್ಷಣ ಸಾಂಸ್ಕೃತಿಕ ಆಕ್ರಮಣ (cultural-invasion). ದಾಳಿಗೊಳಗಾದ ಶೋಷಿತ ಜನರು ತಮ್ಮ ಸ್ವಂತಿಕೆಯನ್ನು ಕಳೆದು ಕೊಂಡು ತಮ್ಮ ಜೀವನವನ್ನು ರೂಪಿಸುವ ಸ್ವಾತಂತ್ರ್ಯವನ್ನು ಬಿಟ್ಟುಬಿಡುತ್ತಾರೆ. ಮತ್ತು ಧಾಳಿ ನಡೆಸಿದವರ ಜೀವನಮೌಲ್ಯ, ಜೀವನಗುರಿ, ಜೀವನಾದರ್ಶಗಳನ್ನು ತಮ್ಮದಾಗಿಸಿಕೊಳ್ಳುತ್ತಾರೆ. ಇದರಿಂದ ಶೋಷಿತ ಜನರಲ್ಲಿ ಪರಾತ್ಮ ಭಾವನೆ ಬೆಳೆದು ಅವರ ವಿಚಾರ ಹಾಗೂ ಕೃತಿಗಳಲ್ಲಿ ಅಂತರ ಬೆಳೆದು, ಅವರು ಬಳಸುವ ಶಬ್ದಗಳು ಅರ್ಥಶೂನ್ಯವಾಗುತ್ತವೆ. ಅವರ ಕೃತಿಗಳು ವಿವೇಚನಾರಹಿತವಾಗುತ್ತವೆ. ಹೀಗೆ ಕ್ರಮೇಣ ಹತ್ತಿಕ್ಕಲ್ಪಟ್ಟ ಜನರು ಹಾಗೂ ದೇಶಗಳು ಪರಾವಲಂಬಿಗಳಾಗಿ ಅಭಿಮಾನಶೂನ್ಯರಾಗುತ್ತಾರೆ ಮತ್ತು ತಮ್ಮಿಂದಲೇ ವಿಮುಖ (alienate) ರಾಗು ತ್ತಾರೆ. ಇಂದಿನ ಪ್ರಚಲಿತ ಶಿಕ್ಷಣ ಪದ್ಧತಿ ಹಾಗೂ ಮಕ್ಕಳನ್ನು ಬೆಳೆಸುವ ರೀತಿಗಳು ಶೋಷಣೆ ನಡೆಸುವ ಜನರ ಸಂಸ್ಕೃತಿಯನ್ನೇ ಪ್ರತಿಪಾದಿಸುತ್ತವೆ.

2.1.6 ಸಂಪೂರ್ಣ ಮಾನವತ್ವ ತರುವ ಕ್ರಾಂತಿಯ ಲಕ್ಷಣಗಳು ಸಹಕಾರ (co–operation), ಒಗ್ಗಟ್ಟು (unity), ಸಂಘಟನೆ (organization) ಮತ್ತು ಸಾಂಸ್ಕೃತಿಕ ಸಮ್ಮಿಶ್ರತೆ (cultural synthesis). ಶೋಷಣೆಗೊಳಗಾದ ವರು ಸಂಪೂರ್ಣ ಮಾನವೀಯತೆಯನ್ನು ತರಲು ಹೋರಾಡುವಾಗ ಕೆಲವು ಸಂಗತಿ ಗಳನ್ನು ನೆನಪಿನಲ್ಲಿಡಬೇಕು. ಹತ್ತಿಕ್ಕಿದವರು ಮೊದಲು ಅನುಕರಣೆ ಮಾಡುವುದು ಹತ್ತಿಕ್ಕುವವರನ್ನೇ. ಏಕೆಂದರೆ ಹತ್ತಿಕ್ಕುವವರೇ ನಿಜವಾದ ಮನುಷ್ಯರೆಂಬುದು ಅವರ ಸುಪ್ತ ಭಾವನೆ. ಇಂತಹ ದ್ವಂದ್ವ ಭಾವನೆಯನ್ನು ತೊರೆದು ತಾವೇ ಶೋಷಿತನ ಅತಿಥೇಯರಾಗಲು ಸಾಧ್ಯ ಎಂದು ತಿಳಿದಾಗ ಸಂಪೂರ್ಣ ಮಾನವತ್ವದ ಬಗ್ಗೆ ಹೋರಾಟ ಸಾಧ್ಯ. ಆದರೆ ವಿಮೋಚನೆ ತರುವಲ್ಲಿ ಇರುವ ದೊಡ್ಡ ತಡೆ ಎಂದರೆ ಯಾವುದೇ ಶೋಷಣಾ ಪರಿಸ್ಥಿತಿಯು ಶೋಷಣೆಗೊಳಗಾದವರ ಪ್ರಜ್ಞೆ ಯನ್ನು ಮುಂದಗೊಳಿಸಿ ಅವರನ್ನು ಪಳಗಿಸಿಡುತ್ತದೆ.

2.2.1 ಇಂತಹ ಪರಿಸ್ಥಿತಿಯಿಂದ ಶೋಷಿತರನ್ನು ಎಚ್ಚರಿಸಿ ಅವರನ್ನು ಸಂಪೂರ್ಣ ಮಾನವತ್ವ ಸಾಧಿಸಲು ಹೋರಾಡುವಂತೆ ಪ್ರೇರೇಪಿಸಲು ಒಂದು ಶಿಕ್ಷಣ ಕ್ರಮದ ಅಗತ್ಯವಿದೆ. ಈ ರೀತಿಯ ಶೋಷಿತರ ಅಥವಾ ಹತ್ತಿಕ್ಕಿದವರ ಶಿಕ್ಷಣ ಕ್ರಮವನ್ನು ಶೋಷಣೆಗೊಳಗಾದವರೇ ರೂಪಿಸಬೇಕೇ ವಿನಾ ಶೋಷಣೆ ನಡೆಸುವವರಲ್ಲ. ತಮ್ಮ ಶೋಷಣೆಯ ಪರಿಸ್ಥಿತಿಯನ್ನು ಎದುರಿಸಿ ಬದಲಾಯಿಸುವಾಗಲೇ ಹೊಸ ಶಿಕ್ಷಣ ಕ್ರಮವನ್ನು ಅವರು ರೂಪಿಸುವರು.

2.2.2 ಈ ರೀತಿಯ ವಿಮೋಚನಾ ಶಿಕ್ಷಣಕ್ಕೆ ರಾಜಕೀಯ ಅಧಿಕಾರ ಅಗತ್ಯ. ಆದರೆ ಶೋಷಿತ ವರ್ಗಕ್ಕೆ ಯಾವ ಅಧಿಕಾರವೂ ಇಲ್ಲ. ಆದ್ದರಿಂದ ಸಂಪೂರ್ಣ ಕ್ರಾಂತಿಯ ಮೊದಲು ಹತ್ತಿಕ್ಕಿದವರ ಶಿಕ್ಷಣ ಕ್ರಮವನ್ನು ರೂಪಿಸಲು ಅಸಾಧ್ಯವೆನಿಸಬಹುದು. ಇಂತಹ ಶಿಕ್ಷಣ ಕ್ರಮದಲ್ಲಿ ಎರಡು ಭೇದಗಳನ್ನು ನಾವು ಗುರುತಿಸಬೇಕು. ಒಂದು ಸುವ್ಯವಸ್ಥಿತ ಶಿಕ್ಷಣ (systematic education). ಇದನ್ನು ರಾಜಕೀಯ ಅಧಿಕಾರವಿದ್ದೇ ಬದಲಾಯಿಸಲು ಸಾಧ್ಯ. ಎರಡನೆಯದು ಶಿಕ್ಷಣ ಕಾರ್ಯಕ್ರಮಗಳು (educational projects). ಇದನ್ನು ಶೋಷಿತರ ಜೊತೆ ಅವರನ್ನು ಸಂಘಟಿಸುವಾಗಲೇ ರೂಪಿಸುತ್ತಾ ಬರಬೇಕು.

2.2.3 ಸಂಪೂರ್ಣ ಮಾನವತ್ವ ತರುವ ಶಿಕ್ಷಣಕ್ರಮದಲ್ಲಿ ಎರಡು ಭಾಗಗಳಿವೆ. ಮೊದಲ ಭಾಗದಲ್ಲಿ ಶೋಷಿತರು ಶೋಷಣಾ ಪರಿಸ್ಥಿತಿಯನ್ನು ಅನಾವರಿಸಿ ಅದನ್ನು ಬದಲಾಯಿಸಲು ಪಣತೊಡುವರು. ಎರಡನೇ ಭಾಗ ಶೋಷಣಾ ಪರಿಸ್ಥಿತಿ ಬದಲಾವಣೆಯಾದಾಗ ಅಸ್ತಿತ್ವಕ್ಕೆ ಬರುವುದು. ಈ ಭಾಗದಲ್ಲಿ ಶಿಕ್ಷಣ ಕ್ರಮವು ಕೇವಲ ಶೋಷಿತರಿಗೆ ಸೀಮಿತವಾಗಿರದೆ, ಅದು ಎಲ್ಲ ಜನರ ಶಿಕ್ಷಣಕ್ರಮವಾಗುವುದು.

2.3.1 ಪ್ರಚಲಿತ ಶಿಕ್ಷಣಪದ್ಧತಿ ಸಮಾಜದಲ್ಲಿರುವ ಈಗಿನ ವ್ಯವಸ್ಥೆಯನ್ನೇ ಪ್ರತಿಬಿಂಬಿಸುತ್ತದೆ. ನಮ್ಮ ಸಮಾಜ ಇರುವುದು ಭೇದ ಭಾವನೆಯ ತಳಹದಿಯ ಮೇಲೆ. ಶ್ರೀಮಂತ-ಬಡವ, ಮೇಲು-ಕೀಳು, ಗಂಡು–ಹೆಣ್ಣು ಮುಂತಾದ ಭೇದ ಭಾವಗಳು ಸಮಾಜದ ಪ್ರತಿಯೊಂದು ಸ್ತರದಲ್ಲೂ ಹಾಸುಹೊಕ್ಕಿವೆ. ಅದೇ ರೀತಿ ನಮ್ಮಲ್ಲಿಯ ಶಿಕ್ಷಣಪದ್ಧತಿಯಲ್ಲಿ ಎದ್ದು ತೋರುವ ಅಂಶವೆಂದರೆ ಶಿಕ್ಷಕ–ವಿದ್ಯಾರ್ಥಿ, ಕಲಿಸುವವ–ಕಲಿಯುವವರ ಮಧ್ಯೆ ಇರುವ ಭೇದಭಾವ. ಈಗಿನ ಶಿಕ್ಷಣಪದ್ಧತಿಯಲ್ಲಿ ಮುಖ್ಯ ಪಾತ್ರ ಶಿಕ್ಷಕನದ್ದು. ಅವನೇ ಯಾವ ಪಾಠಗಳನ್ನು ಕಲಿಸಬೇಕೆಂದು ನಿರ್ಧಾರ ಮಾಡುವವನು. ಅವನೇ ಕಲಿಸುವ ಪಾಠಗಳ ಬಗ್ಗೆ ವಿಚಾರ ಮಾಡುವ

ವನು. ಕಲಿಯುವವರ ಕೆಲಸವೆಂದರೆ ಕೇಳುವುದು, ಬಾಯಿಪಾಠ ಮಾಡುವುದು ಮತ್ತು ಪರೀಕ್ಷೆಯಲ್ಲಿ ಪ್ರಶ್ನಪತ್ರಿಕೆಗಳಿಗೆ ಉತ್ತರ ನೀಡುವುದು. ಈ ಶಿಕ್ಷಣದಲ್ಲಿ ಸ್ವಂತ ವಿವೇಚನೆಗೆ ಅವಕಾಶವಿಲ್ಲ.

2.3.2 ಇಂತಹ ಪದ್ಧತಿಯನ್ನು 'ಠೇವಣಿ' ವಿಧಾನದ ಶಿಕ್ಷಣ (banking concept of education) ಎಂದು ಫ್ರೈರೆ ಕರೆದಿದ್ದಾನೆ. ಬ್ಯಾಂಕಿನಲ್ಲಿ ಹಣ ತುಂಬಿದಂತೆ ವಿವಿಧ ವಿಷಯಗಳ ವಿವರಗಳನ್ನು ವಿದ್ಯಾರ್ಥಿಗಳ ತಲೆಯಲ್ಲಿ ತುಂಬು ತ್ತಾನೆ ಶಿಕ್ಷಕ. ಈ ಪದ್ಧತಿಯ ಪ್ರಕಾರ ಹೆಚ್ಚು ಹೆಚ್ಚು ವಿಷಯಗಳನ್ನು ತುಂಬಿಸಲು ಶಕ್ಯನಾಗಿರುವವನು ಆದರ್ಶ ಶಿಕ್ಷಕನಾಗುತ್ತಾನೆ. ಹೆಚ್ಚು ಹೆಚ್ಚು ವಿವರಗಳನ್ನು ತಲೆಬುರುಡೆಯಲ್ಲಿ ತುಂಬಿಸಿ ಪರೀಕ್ಷೆಯಲ್ಲಿ ಹೊರಗೆಡವಿದರೆ ಒಬ್ಬನು ಆದರ್ಶ ವಿದ್ಯಾರ್ಥಿಯಾಗಲು ಯೋಗ್ಯನು. ಅಂದರೆ ಶಿಕ್ಷಕ ಕೇವಲ ಕರ್ತೃವಾಗಿದ್ದು, ವಿದ್ಯಾರ್ಥಿ ಕ್ರಿಯಾಶೂನ್ಯ ಅಕರ್ತೃ, ಒಂದು ಸಾಮಗ್ರಿ. ಜ್ಞಾನವೆಲ್ಲಾ ಶಿಕ್ಷಕನಲ್ಲಿದ್ದು, ವಿದ್ಯಾರ್ಥಿಗಳು ಅವೆಲ್ಲವನ್ನು ಶಿಕ್ಷಕನಿಂದಲೇ ಪಡೆಯಬೇಕು.

2.3.3 ಈ ಪದ್ಧತಿಯಿಂದ ಜ್ಞಾನದ ನಿರ್ಮಾಣವಾಗುವುದಿಲ್ಲ. ನಿಜವಾದ ಜ್ಞಾನವೆಂದರೆ ಸುತ್ತಮುತ್ತಲಿನ ಪರಿಸ್ಥಿತಿಯನ್ನು ಬದಲಿಸಿ ಹೊಸಜಗತ್ತನ್ನು ನಿರ್ಮಿಸುವ ವಿಚಾರ ಮತ್ತು ಕೃತಿಯಾಗಿದೆ. 'ಠೇವಣಿ' ವಿಧಾನದ ಶಿಕ್ಷಣದಲ್ಲಿ ಸ್ವತಂತ್ರ ವಿಚಾರ ಶಕ್ತಿಗೆ ಪ್ರೋತ್ಸಾಹ ಇಲ್ಲದ್ದರಿಂದ ಅದು ಶೋಷಕ ವರ್ಗಕ್ಕೆ ಲಾಭ ದಾಯಕ. ಶೋಷಿತರಲ್ಲಿ ಅನ್ಯಾಯದ ವಿರುದ್ಧ ಸಂತಾಪ ನಿರ್ಮಾಣವಾಗುವ ಶಕ್ಯತೆ ಅದಕ್ಕೆ ಇಲ್ಲ. ಮನುಷ್ಯನನ್ನು ಎಚ್ಚರಿಸುವ ಪ್ರಯತ್ನವೂ ಅದರಲ್ಲಿ ನಡೆಯುವುದಿಲ್ಲ.

2.4.1 ಇದಕ್ಕೆ ತದ್ವಿರುದ್ಧವಾದದ್ದೇ ಸಂವಾದ ಪದ್ಧತಿಯ ಶಿಕ್ಷಣ (dialogical education) ಅಥವಾ ಸಂವಾದದ ಮೂಲಕ ಸಮಸ್ಯೆಯನ್ನು ಬಗೆಹರಿಸುವ ಶಿಕ್ಷಣ ಪದ್ಧತಿ (problem solving education) ಅಥವಾ ಸಮಸ್ಯೆಯನ್ನು ಮುಂಡಿಸುವ ಶಿಕ್ಷಣ (problem - posing education). ಅದನ್ನೇ ಹತ್ತಿಕ್ಕಿದವರ ಶಿಕ್ಷಣಕ್ರಮ (pedagogy of the oppressed), ಸ್ವಾತಂತ್ರ್ಯಕ್ಕೋಸ್ಕರ ಸಾಂಸ್ಕೃತಿಕ ಕಾರ್ಯ (cultural action for freedom) ಅಥವಾ ಅರಿವಿನ ಜಾಗೃತಿ ಅಥವಾ ಜಾಗೃತೀಕರಣ ಅಥವಾ ಅರಿವು ಮೂಡಿಸುವಿಕೆ (conscientization) ಎಂತಲೂ ಕರೆಯಬಹುದು. ಹತ್ತಿಕ್ಕಿದವ ರನ್ನು ಅಥವಾ ಶೋಷಿತರನ್ನು ಪೂರ್ಣವಾಗಿ ಜಾಗೃತಗೊಳಿಸಿ ಅವರನ್ನು ಕೃತಿಗೆ

ಇಳಿಯುವಂತೆ ಮಾಡುವುದೇ ಈ ಶಿಕ್ಷಣ ಪದ್ಧತಿಯ ಉದ್ದೇಶ. ಅವರನ್ನು ಕಾಡು ತ್ತಿಪ್ಪ ಬಂಧನಗಳಿಂದ ಮುಕ್ತಗೊಳಿಸಿ ಅವರ ಸ್ವಾತಂತ್ರ್ಯಕ್ಕೋಸ್ಕರ, ಅವರ ಪೂರ್ಣ ಮಾನವತ್ವಕ್ಕೋಸ್ಕರ ನಡೆಸುವ ಸಾಂಸ್ಕೃತಿಕ ಕೃತಿ ಅದು.

2.4.2 ಸಮಸ್ಯೆ ಬಿಡಿಸುವ ಶಿಕ್ಷಣ ಪದ್ಧತಿ ಅಥವಾ ಅರಿವಿನ ಜಾಗೃತಿಯ ಮುಖ್ಯ ಸಾಧನ ಸಂವಾದ. ಶೋಷಿತರು ಅಥವಾ ಹತ್ತಿಕ್ಕಿದವರು ಕೀಳು, ದಬ್ಬಾಳಿಕೆ ನಡೆಸುವವರು ಮೇಲು ಎಂಬ ಭಾವನೆ ಸಲ್ಲದು ಎಂದು ಖಚಿತಪಡಿಸುವುದು ಸಂವಾದದಿಂದ. ಅರಿವಿನ ಎಚ್ಚರಿಕೆಯು ಕ್ರಿಯೆಯಲ್ಲಿ ಕಲಿಯುವವ ಕಲಿಸುವವನ ಸಾಧನ, ಸಾಮಾಗ್ರಿ ಅಲ್ಲ. ಸಂವಾದದಿಂದ ಸಾಮಾಜಿಕ, ರಾಜಕೀಯ, ಆರ್ಥಿಕ ವ್ಯವಸ್ಥೆಗಳಲ್ಲಿಯ ಅಂತರ್ವಿರೋಧಗಳು ಮನದಟ್ಟಾಗಿ ಪ್ರಚಲಿತ ಪರಿಸ್ಥಿತಿಯಲ್ಲಿಯ ದಬ್ಬಾಳಿಕೆ ವಿರುದ್ಧ ಹೋರಾಡಲು ಶೋಷಿತರು ಪ್ರವೃತ್ತರಾಗುತ್ತಾರೆ; ಈ ಪ್ರಕ್ರಿಯೆಯಲ್ಲಿ ಕಲಿಯುವವನು ಸಕ್ರಿಯವಾಗಿ ಭಾಗವಹಿಸಲು ಸಾಧ್ಯ.

2.4.3 ಸಮಾಜದ ಅಂತರ್ವಿರೋಧಗಳ ಅರಿವನ್ನು ಘೋಷಣೆ, ಭಾಷಣ, ಪ್ರಚಾರ ಪತ್ರಿಕೆ ಮುಂತಾದ ಸಾಧನಗಳ ಮೂಲಕವೂ ನೀಡಬಹುದು. ಆದರೆ ಆ ಸಾಧನಗಳು ಅಷ್ಟು ಪರಿಣಾಮಕಾರಿಯಲ್ಲ. ಏಕೆಂದರೆ ಅವುಗಳಲ್ಲಿ ಕೇವಲ ಶೋಷಿತರ ಬಗ್ಗೆ ವಿಚಾರ ಮೂಡಿರುತ್ತದೆಯೇ ವಿನಾ ಅವರ ಜೊತೆ ಅಲ್ಲ. ಶೋಷಿತ ಜನರು ಕ್ರಿಯೆ ಮಾಡುವಂತೆ ಅವು ಹುರಿದುಂಬಿಸುವಂತಿದ್ದರೂ ಅವರೇ ಸ್ವತಃ ವಿಚಾರ ಮಾಡುವುದಿಲ್ಲವಾದ್ದರಿಂದ ಅಲ್ಲಿ ವಿವೇಚನಾತ್ಮಕ ಕೃತಿ ಇಲ್ಲ. ವಿಶಿಷ್ಟ ಪರಿಣಾಮದ ವಿಚಾರ (reflection) ಮಾಡಿದ ನಂತರ ಕೈಗೊಂಡ ಕ್ರಿಯೆ (action) ಯೇ ಕೃತಿ (praxis) ಎನಿಸುತ್ತದೆ. ಅದು ದಮಿತರ ಜೊತೆ ನಡೆಸಿದ ಸತ್ಯ ಸಂವಾದದಿಂದಲೇ ಮೂಡಿಬರಬೇಕು.

2.4.4 ಇಂತಹ ಸಂವಾದ ಜರುಗಲು ಕೆಲವು ಮುಖ್ಯ ಅವಶ್ಯಕತೆಗಳಿವೆ. ಮೊದಲ ಅವಶ್ಯಕತೆ ಒಲವು ಅಥವಾ ಪ್ರೀತಿ (love) – ಜಗತ್ತಿನ ಮತ್ತು ಎಲ್ಲ ಜನರ ಮೇಲೆ ಪ್ರೀತಿ. ದಬ್ಬಾಳಿಕೆಯಲ್ಲಿ ಪ್ರೀತಿ ಇಲ್ಲ. ಶೋಷಿತ ವರ್ಗದ ಮುಕ್ತಿಯ ಕೆಲಸವೇ ಪ್ರೀತಿಯ ಕೆಲಸ. ನಂತರದ ಬಹುಮುಖ್ಯ ಅವಶ್ಯಕತೆ ದೀನತೆ (humility). ಶೋಷಣೆಯ ಪರಿಸ್ಥಿತಿಯನ್ನು ಬದಲಾಯಿಸುವ ಕರ್ತವ್ಯ ಕೇವಲ ತಿಳಿದ ಕೆಲವು ಮಂದಿಯದ್ದು, ಇಂತಹ ಕೆಲವರಿಗೆ ಮಾತ್ರ ಎಲ್ಲಾ ಗೊತ್ತಿದೆ; ಶೋಷಣೆಗೊಳಗಾದ ಬಹು ಮಂದಿ ಕಡು ಮೂರ್ಖರು–ಎಂಬ ಭಾವನೆಯಿಂದ ಇಂತಹ ಕೆಲವು ಮಂದಿ ತಮ್ಮಷ್ಟಕ್ಕೇ ಇದ್ದು ಉಳಿದ ಜನರಿಂದ ಬೇರ್ಪಟ್ಟಿದ್ದರೆ

ಸಂವಾದ ನಡೆಯಲು ಸಾಧ್ಯವಿಲ್ಲ. ಸಂವಾದಕ್ಕೆ ಮೂರನೆಯ ಅವಶ್ಯಕತೆ ಜನರಲ್ಲಿ ನಂಬಿಕೆ (faith). ಮನುಷ್ಯನ ಮುಖ್ಯ ಗುರಿ ಸಂಪೂರ್ಣ ಮಾನವೀಯತೆಯನ್ನು ಪಡೆಯುವಂಥದ್ದು. ಈ ದಿಶೆಯಲ್ಲಿ ಜನರು ಪರಿಸ್ಥಿತಿಯನ್ನು ಬದಲಾಯಿಸಲು ಶಕ್ಯರು ಎಂಬ ದೃಢನಂಬಿಕೆ ಅತ್ಯಗತ್ಯ.

ಒಲವು, ದೀನತೆ, ನಂಬಿಕೆಗಳೊಂದಿಗೆ ಸಂವಾದಕ್ಕೆ ಬೇಕಾದದ್ದು ನಿರೀಕ್ಷೆ ಮತ್ತು ಭರವಸೆ (hope). ಆಸೆಯನ್ನು ಬಿಡದೆ, ಯೋಜಿತ ಗುರಿಯಿಂದ ಪ್ರೇರಿತನಾಗಿ, ಅನ್ಯಾಯರಹಿತ ವ್ಯವಸ್ಥೆಯನ್ನು ತರುವುದಕ್ಕೋಸ್ಕರ ಸದಾ ಹೋರಾಡಲು ತಯಾರಿರುವುದೇ ನಿಜವಾದ ಭರವಸೆ. ಕೊನೆಯದಾಗಿ ವಿಮರ್ಶಾತ್ಮಕ ವಿಚಾರತೆ (critical thinking) ಸಂವಾದಕ್ಕೆ ಅತಿ ಮುಖ್ಯ. ವಿಮರ್ಶಾತ್ಮಕ ವಿಚಾರತೆ ಅಂದರೆ ಯಾವುದೇ ಪರಿಸ್ಥಿತಿಯನ್ನು ಅದು ಹಾಗೆಯೇ ಇರುವಂತಹದ್ದು ಎಂದು ತಿಳಿಯದೆ ಅದು ನಿರಂತರ ಬದಲಾವಣೆ ಹೊಂದುತ್ತಿರುವಂತಹುದು ಎಂದು ಬಗೆದು ಮಾನವೀಯತೆಯ ಲಕ್ಷಣಗಳಿಗನುಸಾರವಾಗಿ ಅದನ್ನು ಬದಲಾಯಿಸಲು ಪ್ರಯತ್ನಿಸುವುದು.

2.4.5 ಇವು ಸಂವಾದ ನಡೆಸಲು ಬೇಕಾದ ಅವಶ್ಯಕತೆಗಳಾದರೆ, ಸಂವಾದ ನಡೆಸುವುದು ಯಾವುದರ ಬಗ್ಗೆ? ಇದಕ್ಕೆ ಉತ್ತರ ಕೊಡುವ ಮೊದಲು ಪ್ರಾಸಂಗಿಕವಾಗಿ ಕೆಲವು ವಿಚಾರಗಳನ್ನು ಅರ್ಥ ಮಾಡಿಕೊಳ್ಳುವುದು ಅಗತ್ಯ.

ಪರಿಪೂರ್ಣವಾಗಿರದ ಜೀವಿಗಳಲ್ಲಿ ಮನುಷ್ಯ ಮಾತ್ರ ತನ್ನ ಬಗ್ಗೆ ವಿಚಾರ ಮಾಡಲು ಶಕ್ಯ. ಪ್ರಾಣಿಗಳಿಗೆ ತಮ್ಮ ಜೀವನವನ್ನು ತಮ್ಮ ಕೆಲಸಗಳಿಂದ ಪ್ರತ್ಯೇಕಿಸಲು ಆಗುವುದಿಲ್ಲ. ಅಂದ ಮೇಲೆ ಪ್ರಾಣಿಗಳಿಗೆ ಕೆಲವು ಗುರಿಗಳನ್ನು ಇಟ್ಟು ಕೆಲಸ ಮಾಡಲು ಸಾಧ್ಯವಿಲ್ಲ. ತಮ್ಮ ನೈಸರ್ಗಿಕ ಪರಿಸ್ಥಿತಿಯನ್ನು ಅವು ಸಂಪೂರ್ಣವಾಗಿ ಹೊಂದಿಕೊಂಡಿದ್ದು ಅದನ್ನು ಬದಲಾಯಿಸುವ ಗೊಡವೆಗೆ ಅವು ಹೋಗುವುದಿಲ್ಲ. ಅಷ್ಟೇ ಅಲ್ಲ, ಪ್ರಾಣಿಗಳು ಐತಿಹಾಸಿಕ ಜೀವಿಗಳಲ್ಲ. ಅವುಗಳ ಕ್ರಿಯೆಗಳೆಲ್ಲ ವರ್ತಮಾನ ಕಾಲದಲ್ಲಿ ಪರ್ಯವಸಾನಗೊಳ್ಳುವವು. ಭೂತಕಾಲದ ಅನುಭವದಿಂದ ಅವು ಕಲಿಯಲಾರವು. ಭವಿಷ್ಯತ್ಕಾಲಕ್ಕೋಸ್ಕರ ಸಿದ್ಧತೆ ನಡೆಸಲರಿಯವು. ಕೇವಲ ಸಹಜ ಪ್ರೇರಣೆ ಅಥವಾ ದೈಹಿಕ ಪ್ರಚೋದನೆಗಳಿಗನುಸಾರವಾಗಿ ಅವು ತಮ್ಮನ್ನೇ ನಡೆಸಿಕೊಳ್ಳುವವು. ಹೊರಗಿನ ಪರಿಸ್ಥಿತಿಗಳು ಪ್ರಾಣಿಗಳಿಗೆ ಯಾವುದೇ ಸವಾಲನ್ನು ಒಡ್ಡುವುದಿಲ್ಲ. ಆದ್ದರಿಂದ ಹೊರಜಗತ್ತನ್ನು ಬದಲಾಯಿಸುವ ಯೋಚನೆ ಅವಕ್ಕಿಲ್ಲ; ತಮ್ಮ ಪರಿಸರವನ್ನು 'ಪ್ರಾಣೀಕರಣ' ಮಾಡಬೇಕೆಂಬ ಹಂಬಲವೂ ಅವುಗಳಿಗೆ ಇಲ್ಲ.

ಮನುಷ್ಯನಿಗಾದರೋ ತನ್ನ ಕೆಲಸದ ಪ್ರಜ್ಞೆ ಇದೆ. ತನ್ನ ಜೀವನದಲ್ಲಿ ಕೆಲವು ಗುರಿಗಳನ್ನಿರಿಸಿಕೊಂಡು ಅವನು ಮುಂದೆ ಹೋಗುತ್ತಾನೆ. ತನ್ನ ಪರಿಸರದಲ್ಲಿ ರಚನಾತ್ಮಕ ಬದಲಾವಣೆಗಳನ್ನು ತರಲು ಅವನು ಶಕ್ತನು. ಪ್ರಾಣಿಗಳ ಹಾಗೆ ಪ್ರಪಂಚದಲ್ಲಿ ಕೇವಲ ಇರುವವನಾಗಿರದೇ ತನ್ನ ಜೀವನ ಸಾಗಿಸುವವನಾಗಿರುತ್ತಾನೆ. ಮನುಷ್ಯ ಒಬ್ಬ ಐತಿಹಾಸಿಕ ಜೀವಿ. ತನ್ನ ಹಿಂದಿನ ಅನುಭವದಿಂದ ಜ್ಞಾನ ಪಡೆದು ಮುಂದಿನ ಸ್ಥಿತಿಗತಿಗಳಿಗೆ ಪೂರ್ವ ಸಿದ್ಧತೆ ಮಾಡಲು ಸಮರ್ಥನು. ಮನುಷ್ಯ ನಿರಂತರವಾಗಿ ತನ್ನ ಪರಿಧಿ, ಸೀಮೆಗಳನ್ನು ಮೀರಿ ಹೊಸ ಸಾಧ್ಯತೆಗಳ ಕನಸನ್ನು ಕಾಣುತ್ತಾನೆ. ಆ ಕನಸುಗಳನ್ನು ನನಸು ಮಾಡಲೂ ಅವನಿಗೆ ಯೋಗ್ಯತೆ ಇದೆ.

ಹೀಗೆ ಪ್ರಾಣಿಗಳು ತಮ್ಮ ನೈಸರ್ಗಿಕ ಪರಿಧಿಯ ಬಂಧನಕ್ಕೊಳಗಾಗಿ ಕ್ರಿಯೆಗಳನ್ನು ಮಾಡುತ್ತವೆ. ಆದರೆ ಮನುಷ್ಯ ನಿಸರ್ಗದ ಸೀಮೆಗಳನ್ನು ಉಲ್ಲಂಘಿಸಿ ಸಂಸ್ಕೃತಿಯನ್ನೂ ಇತಿಹಾಸವನ್ನೂ ರಚಿಸುತ್ತಾನೆ. ಪ್ರಾಣಿಗಳದ್ದು ಕೇವಲ ಕ್ರಿಯೆ. ಆದರೆ ಮನುಷ್ಯ ಮಾಡುವುದು ಕೃತಿ. ಇಚ್ಛಿತ ಪರಿಣಾಮಗಳನ್ನು ಸಾಧಿಸಲು ಮಾನವನು ಮಾಡುವ ವಿಚಾರಪೂರ್ವಕ ಕ್ರಿಯೆಯೇ ಕೃತಿ ಎನಿಸುವುದು.

ಕೃತಿ ಮಾಡುವ ಮನುಷ್ಯನ ನಿರ್ಮಾಣವೇ ಹೊಸ ಶಿಕ್ಷಣದ ಅಂತಿಮ ಗುರಿ. ಈಗಿನ ದಮಿತ ವರ್ಗಕ್ಕೆ ತಮ್ಮ ದುಃಖದ ಮೂಲವು ಶೋಷಣೆಯ ಮೇಲೆ ಆಧಾರಿತವಾದ ಸಮಾಜವ್ಯವಸ್ಥೆಯಲ್ಲಿದೆ ಎಂದು ಗೊತ್ತಿಲ್ಲ. ಅದಕ್ಕೆ ಬದಲಾಗಿ ತಮ್ಮ ದುಃಖವನ್ನು ತಮ್ಮ ಹೊಟ್ಟೆಯಲ್ಲೇ ಇಟ್ಟು ದೈವವನ್ನು ಶಪಿಸುತ್ತಾ ಅನ್ಯಾಯಗಳನ್ನು ಸಹಿಸುತ್ತಾರೆ. ದಬ್ಬಾಳಿಕೆಯ ಸ್ವರೂಪ ಹಾಗೂ ಅದರ ವಿರುದ್ಧ ಹೋರಾಡುವ ವಿಷಯದ ಬಗ್ಗೆ ವಿಚಾರಮಾಡುವುದಿಲ್ಲ. ಇಂತಹ ಪರಿಸ್ಥಿತಿಯಲ್ಲಿ ಅಶಿಕ್ಷಿತ ಜನರಿಗೆ ತಮ್ಮ ಸಮಾಜದ ವಾಸ್ತವಿಕ ಪರಿಸ್ಥಿತಿಯ ಪರಿಚಯ ಮಾಡಿಸಿ, ಅವರ ತಿಳುವಳಿಕೆಯನ್ನು ಜಾಗೃತಗೊಳಿಸಿ ಪರಿಸ್ಥಿತಿಯನ್ನು ಬದಲಾಯಿಸಲು ಪ್ರೇರೇಪಿಸುವುದೇ ಸಂವಾದದ ಮೂಲಕ ಸಮಸ್ಯೆಗಳನ್ನು ಪರಿಹಾರ ಮಾಡುವ ಶಿಕ್ಷಣದ ಗುರಿ. ಪ್ರಭಾವಿಯಾದ ಕೃತಿಯನ್ನು ಜನರು ಕೈಗೊಳ್ಳಬೇಕಾದರೆ ಅವರಿಗೆ ತಮ್ಮ ಪರಿಸ್ಥಿತಿಯ ಪೂರ್ಣ ಮತ್ತು ಸತ್ಯ ತಿಳಿವಳಿಕೆ ಅಗತ್ಯ.

ಜನರಿಗೆ ತಮ್ಮ ವಾಸ್ತವ ಪರಿಸ್ಥಿತಿಯ ಪರಿಚಯ ಮಾಡಿಸುವುದು ಹೇಗೆ? ಮನುಷ್ಯ ಕ್ರಿಯಾತ್ಮಕ ಅಥವಾ ರಚನಾತ್ಮಕ ವ್ಯಕ್ತಿ ಎಂದ ಮೇಲೆ ಕೇವಲ ವಸ್ತು, ಸಾಮಾಗ್ರಿಗಳನ್ನು ಅವನು ರಚಿಸುವುದಿಲ್ಲ. ಅವನು ಮುಖ್ಯವಾಗಿ ಸಾಮಾಜಿಕ ವ್ಯವಸ್ಥೆಗಳನ್ನೂ ಸಂಸ್ಕೃತಿಯನ್ನೂ ರೂಪಿಸುತ್ತಾನೆ.

ಅವನ ವಿಚಾರ ಮತ್ತು ಕಲ್ಪನೆಗಳು ಅವನು ರಚಿಸಿದ ಸಮಾಜ ಹಾಗೂ ಸಂಸ್ಕೃತಿಯ ಪ್ರತೀಕಗಳಾಗಿವೆ. ಮಾನವ 'ತ್ರಿಕಾಲ ಜೀವಿ'ಯಾದ್ದರಿಂದ ಅವನ ಇತಿಹಾಸದಲ್ಲಿ ಕೆಲವೊಂದು 'ಯುಗ'ಗಳನ್ನು ನಾವು ಗುರುತಿಸಬಹುದು. ಒಂದೊಂದು ಯುಗದಲ್ಲಿ ಕೆಲವು ನಿರ್ದಿಷ್ಟ ವಿಚಾರಗಳು, ಕಲ್ಪನೆಗಳು, ಆಶಯಗಳು, ಸಂಶಯಗಳು, ಮೌಲ್ಯಗಳು ಮತ್ತು ಸವಾಲುಗಳು ಸ್ಪಷ್ಟವಾಗಿರುತ್ತವೆ. ಈ ವಿಚಾರಗಳು ಯೋಗ್ಯ ಕೃತಿಗೆ ಪ್ರಚೋದನೆ ನೀಡುತ್ತವೆ ಮತ್ತು ನಡೆದ ಕೃತಿಯಿಂದ ಸ್ಪಷ್ಟಗೊಳ್ಳುತ್ತವೆ. ಈ ಕೃತಿ–ವಿಚಾರಗಳು ತಮ್ಮ ವಿರುದ್ಧ ಸಂಗತಿಗಳ ಸಂಘರ್ಷಣೆಯೊಂದಿಗೆ ಪರಿಪೂರ್ಣತೆಯತ್ತ ಸಾಗುತ್ತವೆ. ಜನರ ಸಮಗ್ರ ಜೀವನವನ್ನು ಪ್ರತಿಬಿಂಬಿಸುವ ಇಂತಹ ವಿಚಾರಗಳ ಸಂಕೀರ್ಣವನ್ನು ನಾವು ವಿಚಾರ ಜಗತ್ತು (thematic universe) ಅಥವಾ ಅರ್ಥಪೂರ್ಣ ವಿಚಾರಗಳು (meaningful themes) ಎಂದು ಕರೆಯಬಹುದು. ಜನರ ವಿಚಾರ–ಪ್ರತಿವಿಚಾರಗಳು ಪ್ರತ್ಯೇಕವಾಗಿ ಉಳಿಯದೆ, ಒಂದಕ್ಕೊಂದು ಹೊಂದಿಕೆಯಾಗಿದ್ದು, ಒಂದು ವಿಚಾರ-ಕೃತಿ ಬೇರೆ ವಿಚಾರ-ಕೃತಿಗಳಿಗೂ ಕಾರಣಭೂತವಾಗಿ ಪರಿಣಮಿಸುವುದರಿಂದ ಅವನ್ನು ಜನಕ ವಿಚಾರಗಳು (generative themes) ಎಂತಲೂ ಕರೆಯಬಹುದು.

ಯಾವುದೇ ಜನ ಸಮುದಾಯದ ಜನಕ ವಿಚಾರಗಳನ್ನು ಸಂಗ್ರಹಿಸಿ, ಅವುಗಳನ್ನು ಸ್ಪಷ್ಟಪಡಿಸುವ ಸೂತ್ರ (code) ಗಳನ್ನು ರಚಿಸಿ ಆ ಸೂತ್ರಗಳನ್ನು ಜನರ ಮುಂದಿಟ್ಟು, ಅವುಗಳ ಮೂಲಕ ಜನರು ಸಂವಾದದಿಂದ ತಮ್ಮ ಸಮಾಜದ ವಾಸ್ತವಿಕ ಅರಿವು ಮಾಡಿಕೊಳ್ಳುವಂತೆ ಮಾಡುವುದು ಹೊಸ ಶಿಕ್ಷಣದ ಉದ್ದೇಶ. ಈ ಅರಿವಿನಿಂದ ಸಂವಾದದ ಮೂಲಕವೇ ಶೋಷಿತ ಪರಿಸ್ಥಿತಿಯಿಂದ ಮುಕ್ತರಾಗುವಂತೆ ಕೆಲಸ ಕಾರ್ಯಗಳನ್ನು ಕೈಗೊಳ್ಳಲು ನಿರ್ಧಾರ ತೆಗದುಕೊಳ್ಳಲಾಗುವುದು. ಅಕ್ಷರಜ್ಞಾನವೂ ಇಂತಹ ಕೆಲಸಕಾರ್ಯಗಳಲ್ಲಿ ಒಂದು. ಇದೇ ಸಂವಾದದ ಮೂಲಕ ಸಮಸ್ಯೆಗಳನ್ನು ಬಗೆಹರಿಸುವ ಶಿಕ್ಷಣ ಪದ್ಧತಿ.

3. ಸಂವಾದದ ಮೂಲಕ ಸಮಸ್ಯೆ ಬಗೆಹರಿಸುವ ಶಿಕ್ಷಣಕ್ರಮದ ರೂಪರೇಷೆಗಳು

3.0 ಶೋಷಿತ ಜನರ ಸಮಗ್ರ ವಾಸ್ತವ ಜೀವನವನ್ನು ತೋರಿಸುವ ಅವರ ವಿಚಾರಗಳನ್ನು ಅಥವಾ ಕಲ್ಪನೆಗಳನ್ನು ಮೊದಲು ಕ್ರೋಢೀಕರಿಸಬೇಕು. ಇಂತಹ ಪ್ರತಿಯೊಂದು ವಿಚಾರವು ಪ್ರತಿನಿಧಿಸುವ ವಾಸ್ತವ ಸಂಗತಿ ಅಥವಾ ಸಮಸ್ಯೆಯನ್ನು ಒಂದು ಸೂತ್ರದ ಮೂಲಕ ಜನರ ಮುಂದಿಡಬೇಕು (codification-ಸೂತ್ರೀಕರಣ). ಆ ಸೂತ್ರದ ಮೇಲೆ ಸಂವಾದದ ಮೂಲಕ ಎಲ್ಲರೂ ತಮ್ಮ ವಿಚಾರಗಳನ್ನು

ವ್ಯಕ್ತಪಡಿಸಬೇಕು. ಸಮಸ್ಯೆಯ ಬಗ್ಗೆ ತಟಸ್ಥ ಮತ್ತು ವಸ್ತುನಿಷ್ಠ ವಿಚಾರ ವಿನಿಮಯ ನಡೆದರೆ ಅರಿವಿನ ಜಾಗೃತಿಗೆ ಮೊದಲ ಹೆಜ್ಜೆ ಇಟ್ಟಂತೆ. ಸಂವಾದದ ಮೂಲಕ ಪಮಿತರ ಸಮಸ್ಯೆಗಳ ಅರಿವಾಗುತ್ತದೆ. ಅವುಗಳ ಶಾಸ್ತ್ರೀಯ ವಿಶ್ಲೇಷಣೆ ನಡೆಯುತ್ತದೆ. ಇವುಗಳಿಂದಾಗಿ ಯಾವ ಸಮಸ್ಯೆಗಳನ್ನು ಬಗೆಹರಿಸಲು ಯಾವ ಕೃತಿ ಬೇಕು ಎಂಬ ಸಂಕಲ್ಪ ನಡೆದು ಯೋಗ್ಯವಾದ ಕೆಲಸ ಕಾರ್ಯಗಳನ್ನು ಕೈಗೊಳ್ಳಲು ಜನರು ತೊಡಗುವರು. ಹಾಗೆ ಯಾವುದೇ ಸಮಸ್ಯೆಯ ಬಗ್ಗೆ ವಿವೇಚನೆ ನಡೆಯುತ್ತಿದ್ದು ಅದನ್ನು ಬಗೆಹರಿಸಲು ಕೆಲವು ಕಾರ್ಯಕ್ರಮಗಳನ್ನು ನಡೆಸುತ್ತಿರುವಾಗಲೇ ಅಕ್ಷರಜ್ಞಾನವನ್ನೂ ಶೋಷಿತರು ಪಡೆಯುವರು.

## 3.1 ಜನರ ವಿಚಾರಗಳ ಅನ್ವೇಷಣೆ ಮತ್ತು ಸೂತ್ರೀಕರಣ

3.1.1 ವಿಚಾರಗಳನ್ನು ಸಂಶೋಧಿಸುವವರು ಅರಿವಿನ ಜಾಗೃತಿ ನಡೆಯಬೇಕಾದ ಸ್ಥಳವನ್ನು ಗುರುತಿಸಿ ಆದಮೇಲೆ, ಆ ಸ್ಥಳದ ಬಗ್ಗೆ ಲಿಖಿತ ಮಾಹಿತಿ ಇದ್ದರೆ ಅದನ್ನು ಮೊದಲು ಪಡೆಯುವರು. ಗುರುತಿಸಿದ ಸ್ಥಳಕ್ಕೆ ಸಂಶೋಧಕರು ಹೋಗಿ ಅಲ್ಲಿಯ ಜನರನ್ನು ಒಟ್ಟುಗೂಡಿಸಿ ತಮ್ಮ ಉದ್ದೇಶವನ್ನು ವಿವರಿಸುವರು. ತಮ್ಮ ಸಂಶೋಧನೆಯನ್ನು ನೆರವೇರಿಸುವ ವಿಧಾನ ಮತ್ತು ಆದರ ಪ್ರಯೋಜನವನ್ನು ಜನರ ಮುಂದಿಟ್ಟು ಜನರ ಸಹಕಾರ ಮತ್ತು ವಿಶ್ವಾಸವಿಲ್ಲದೆ ಏನೂ ಸಾಧ್ಯವಾಗದು ಎಂಬುದನ್ನು ತಿಳಿಯಪಡಿಸುವರು. ಜನರಲ್ಲಿ ಕೆಲವರು ಅನ್ವೇಷಣೆಯಲ್ಲಿ ಸಹಾಯಕರಾಗಲು ಒಪ್ಪಿದರೆ, ಕಾರ್ಯವು ಇನ್ನೂ ಫಲಭರಿತವಾಗುವುದು.

ನಂತರ ಸಂಶೋಧಕರು ಸ್ವಂತವಾಗಿ ಅಥವಾ ಸಹಾಯಕರೊಡನೆ ಊರಿನಲ್ಲೆಲ್ಲಾ ತಿರುಗಾಡಿ ಪ್ರಶ್ನೆಗಳ ಮೂಲಕ, ಜನರೊಡನೆ ನಡೆಸಿದ ಸಂಭಾಷಣೆಯ ಮೂಲಕ ಮತ್ತು ನೇರವಾಗಿ ತಮ್ಮ ವೀಕ್ಷಣೆಯ ಮೂಲಕ ಜನರ ಭಾಷೆ ಮತ್ತು ಅವರ ರೀತಿ, ಪದ್ಧತಿಗಳ ಅಭ್ಯಾಸ ಮಾಡಬೇಕು, ಜನರನ್ನು ಬೇರೆ ಬೇರೆ ವೇಳೆಗಳಲ್ಲೂ ಪ್ರಸಂಗಗಳಲ್ಲೂ ಭೇಟಿ ಮಾಡಿ ಅವರ ಜೀವನದ ನಿಜಸ್ಥಿತಿಯ ಅರಿವು ಮಾಡಿಕೊಳ್ಳಬೇಕು. ಬೇರೆ ಬೇರೆ ಸಂದರ್ಭಗಳಲ್ಲಿ ಅವರ ವರ್ತನೆ ಹೇಗಿದೆ? ಅವರ ಸಮಸ್ಯೆಗಳು ಯಾವುವು? ಎಂಬುದರ ಬಗ್ಗೆ 'ಒಳಗಿನ' ಜ್ಞಾನವನ್ನು ಪಡೆಯಬೇಕು. ತಾವು ಕಂಡುಹಿಡಿದ ಪ್ರತಿಯೊಂದು ವಿಷಯವನ್ನು ತಮ್ಮ ಪುಸ್ತಕಗಳಲ್ಲಿ ಬರೆದಿಡಬೇಕು. ತಾವು ಸಂಶೋಧಿಸಬೇಕೆಂದಿದ್ದ ಪ್ರದೇಶವು ಒಂದು ಸಮಗ್ರ ಘಟಕವಂತಿದ್ದು ತಮ್ಮ ಪ್ರತಿ ಸಂದರ್ಶನದಲ್ಲಿ ಅದನ್ನು ವಿಂಗಡಿಸಿ ಅದರ ಬೇರೆ ಬೇರೆ ಅಂಶಗಳನ್ನು ಗುರುತಿಸಿ ಅವು ಯಾವ ರೀತಿಯಲ್ಲಿ ಒಂದಕ್ಕೊಂದು ಹೊಂದಿ

ಕೊಂಡಿವೆ ಎಂಬುದನ್ನು ತಿಳಿಯಲಿಕ್ಕೆ ಸಂಶೋಧಕರು ಪ್ರಯತ್ನಿಸುವರು. ಹೀಗೆ ಜನರ ಸಮಸ್ತ ಜೀವನವನ್ನು ವಿಭಜಿಸಿ ಪ್ರತ್ಯೇಕಿಸುವುದರಿಂದ ಸಮಗ್ರ ಜೀವನದ ಗುಟ್ಟನ್ನು ಭೇದಿಸಲು ಸಹಾಯಕವಾಗುವುದು.

ಪ್ರತಿ ಸಂದರ್ಶನದ ನಂತರ ಸಂಶೋಧಕರು ಒಂದು ವರದಿಯನ್ನು ಬರೆಯು ವರು. ಬರೆದ ವರದಿಗಳನ್ನು ಸಂಶೋಧಕರೆಲ್ಲರೂ ತಮ್ಮ ಸಹಾಯಕರೊಡನೆ ಚರ್ಚಿಸುವರು. ಈ ಚರ್ಚಾಕೂಟಗಳಲ್ಲಿ ಜನರ ಜೀವನದ ರಹಸ್ಯವನ್ನು ಭೇದಿಸುವ ಎರಡನೇ ಪ್ರಯತ್ನ ನಡೆಯುವುದು. ಒಬ್ಬನ ವರದಿಯು ಬೇರೆಯವರಿಗೆ ಸವಾಲಾಗಿ ಪರಿಣಮಿಸುವುದು. ಜನರ ವಾಸ್ತವ ಚಿತ್ರವು ಒಬ್ಬನ ದೃಷ್ಟಿಕೋನದ ಮುಖಾಂತರ ಇತರರ ಮುಂದೆ ನಿಲ್ಲುವುದು. ಅದೇ ರೀತಿ ತನ್ನ ವರದಿಯ ಮೇಲೆ ಬೇರೆಯವರ ಪ್ರತಿಕ್ರಿಯೆಯು ತನ್ನ ಜನಜೀವನ ಚಿತ್ರವನ್ನು ಇನ್ನೂ ಸೂಕ್ಷ್ಮವಾಗಿ ವಿಮರ್ಶಿಸಲು ಅವನಿಗೆ ನೆರವಾಗುವುದು. ಹೀಗೆ ಸಂಶೋಧನಾ ತಂಡದ ಪ್ರತಿಯೊಬ್ಬರು ಸಮಗ್ರ ಜನಜೀವನಚಿತ್ರವನ್ನು ವಿಭಜಿಸಿ ಪುನಃ ಕೂಡಿಸುವುದರಿಂದ, ಜನಜೀವನದ ಮುಖ್ಯ ಹಾಗೂ ಗೌಣ ಅಂತರ್ವಿರೋಧಗಳನ್ನು ಗುರುತಿಸಲು ಅವರು ಶಕ್ತರಾಗುವರು.

3.1.2 ಅಂತರ್ವಿರೋಧಗಳ ಸಂಕೀರ್ಣವನ್ನು ಗುರುತಿಸಿದ ಮೇಲೆ ಸಂಶೋಧನೆಯ ಎರಡನೇ ಹಂತ ಶುರುವಾಗುತ್ತದೆ.

ಸಂಶೋಧಕರು ತಾವು ಗುರುತಿಸಿದ ಸಮಾಜದ ಅಂತರ್ವಿರೋಧ ಅಥವಾ ವಿಕಾಸ ವಿರೋಧ ಸಂಗತಿಗಳಲ್ಲಿ ಕೆಲವನ್ನು ಆರಿಸಿ, ಅವನ್ನು ಸ್ಪಷ್ಟಪಡಿಸುವ ಸೂತ್ರ (code) ಗಳನ್ನು ಸಿದ್ಧಪಡಿಸುವರು. ಒಂದು ಸೂತ್ರದ ಮೂಲಕ ಸಮಸ್ಯೆಯೊಂದನ್ನು ಜನರ ಮುಂದಿಡುವುದೇ ಸೂತ್ರೀಕರಣ (codification) ಎನಿಸುತ್ತದೆ. ಸೂತ್ರವು ದೃಶ್ಯರೂಪದ ಚಿತ್ರ ಅಥವಾ ಛಾಯಾಚಿತ್ರ ಇರಬಹುದು. ಅಥವಾ ಶ್ರವ್ಯರೂಪದ ಕಿರುನಾಟಕವಿರಬಹುದು. ಅಥವಾ ಎರಡನ್ನೂ ಒಳಗೊಂಡಿರಬಹುದು. ಹೀಗೆ ಸೂತ್ರಗಳ ರೂಪವು ಚಿತ್ರ, ಛಾಯಾಚಿತ್ರ, ನಾಟಕ, ಸ್ಥಿರಚಿತ್ರ, ಚಲನಚಿತ್ರ ಇಲ್ಲವೇ ವಾರ್ತಾಪತ್ರಿಕೆಗಳಲ್ಲಿಯ ಪ್ರಬಂಧ ಅಥವಾ ವಾರ್ತೆ ಆಗಿರಬಹುದು. ಇಂತಹ ಸೂತ್ರಗಳನ್ನು ರೂಪಿಸುವಾಗ ಅಥವಾ ಆರಿಸುವಾಗ ಕೆಲವೊಂದು ತತ್ವಗಳನ್ನು ಮನಸ್ಸಿನಲ್ಲಿಡಬೇಕಾಗುತ್ತದೆ.

ಮೊದಲನೆಯದಾಗಿ ಸೂತ್ರಗಳು ಜನರ ಪರಿಸ್ಥಿತಿಯನ್ನೇ ಹೋಲುವಂತಿರಬೇಕು. ಆದರೆ ಸೂತ್ರದ ವಿಚಾರವು ಅಷ್ಟೊಂದು ಸ್ಪಷ್ಟವಾಗಿಯೂ ಅಥವಾ ಅಷ್ಟೊಂದು ಗೊಂದಲಮಯವಾಗಿಯೂ ಇರಬಾರದು. ಸೂತ್ರದ ವಿಚಾರವು

ಅತ್ಯಂತ ಸ್ಪಷ್ಟವಾಗಿ ಮೂಡಿಬಂದರೆ ಜನರಿಗೆ ಅದನ್ನು ವಿವರಿಸುವುದರಲ್ಲಿ ಏನೂ ಪಾತ್ರವಿರುವುದಿಲ್ಲ. ಅದು ಗೊಂದಲಮಯವಾಗಿದ್ದರೆ, ಸೂತ್ರದ ವಿವರಣೆ ಊಹೆಯ ಆಟವಾಗಿ ಪರಿಣಮಿಸುವುದು. ತನ್ನ ಜಟಿಲತೆಯಲ್ಲೂ ಸರಳವಾಗಿದ್ದು ಹಲವಾರು ರೀತಿಯಲ್ಲಿ ವಿವರಿಸುವ ಸಾಧ್ಯತೆಯನ್ನು ಸೂತ್ರವು ಹೊಂದಿರಬೇಕು. ಕೊನೆಯದಾಗಿ ಒಂದು ಸೂತ್ರದ ವಿಚಾರವು ಕೇವಲ ಒಂದೇ ಒಂದು ಅಂತ ರ್ವಿರೋಧವನ್ನು ತೋರಿಸದೆ, ಹಲವಾರು ಪರಸ್ಪರ ಸಂಬಂಧವುಳ್ಳ ಅಂತರ್ವಿರೋಧ ಗಳನ್ನು ಒಳಗೊಂಡಿರಬೇಕು. ಹೀಗೆ ಒಂದು ಸೂತ್ರದ ಬಗ್ಗೆ ಚರ್ಚೆ ನಡೆಸುವಾಗ ಒಂದು ವಿಚಾರವು ಹಲವಾರು ಬೇರೆ ವಿಚಾರಗಳ ಚರ್ಚೆಗೆ ಎಡೆಗೊಟ್ಟು ತಮ್ಮ ಜೀವನದ ಬೇರೆ ಬೇರೆ ಸಂಗತಿಗಳು ಹೇಗೆ ಒಂದನ್ನೊಂದು ಅವಲಂಬಿಸಿದೆ ಎಂಬು ದನ್ನು ಜನರು ಗ್ರಹಿಸುವರು.

3.1.3 ಈ ರೀತಿ ತಯಾರಿಸಿದ ಸೂತ್ರಗಳನ್ನು ಪುನಃ ಜನರ ಮುಂದಿಟ್ಟು ಅವರ ಪ್ರತಿಕ್ರಿಯೆಗಳನ್ನು ಸಂಗ್ರಹಿಸಲು ತೊಡಗಿದರೆ ಸಂಶೋಧನೆಯ ಮೂರನೇ ಹಂತಕ್ಕೆ ನಾವು ಬರುತ್ತೇವೆ. ಇಲ್ಲಿ ಮುಖ್ಯವಾಗಿ ಗಮನದಲ್ಲಿಡಬೇಕಾದ ಸಂಗತಿ ಎಂದರೆ ಜನರ ಮಾದರಿ ಪ್ರತಿಕ್ರಿಯೆಗಳನ್ನು ಪಡೆಯಲು ಕಡಿಮೆ ಎಂದರೆ 20 ಜನರ ಬೇರೆ ಬೇರೆ ಕೂಟಗಳನ್ನೇರ್ಪಡಿಸಿ ಸೂತ್ರಗಳ ಮೇಲೆ ಚರ್ಚೆ ನಡೆಸಬೇಕು. ಇಂತಹ ಕೂಟಗಳ ಸಂಘಟಕ (co-ordinator) ನು ಜನರ ಅಭಿಪ್ರಾಯಗಳನ್ನು ಕೇಳು ವುದರ ಜೊತೆಗೆ ಸೂತ್ರೀಕರಿಸಿದ ವಿಚಾರದ ಬಗ್ಗೆ ಅವರನ್ನು ಪ್ರಶ್ನಿಸಬೇಕು. ಅವರ ಉತ್ತರಗಳ ಮೇಲೆ ಹೊಸ ಪ್ರಶ್ನೆಗಳನ್ನು ಹಾಕಿ, ಹೊಸ ಸಮಸ್ಯೆಗಳನ್ನು ಮಂಡಿಸಿ ಅವರ ಚರ್ಚೆಯ ವಿಚಾರಗಳನ್ನು ಒಟ್ಟುಗೂಡಿಸಬೇಕು. ಇವನ್ನು ಕೆಲವರು ಬರೆದಿಡ ಬಹುದು ಅಥವಾ ಧ್ವನಿಮುದ್ರಿಸಬಹುದು.

3.1.4 ಸಂಶೋಧನೆಯ ಕೊನೆಯ ಹಂತದಲ್ಲಿ ಜನರ ಪ್ರತಿಕ್ರಿಯೆಗಳನ್ನು ಕೇಳಿ ವಿಶ್ಲೇಷಿಸಿ ಅದರ ಮೇಲೆ ವಿಚಾರಗಳನ್ನು ಸಮಾಜಶಾಸ್ತ್ರದ ಬೇರೆ ಬೇರೆ ಅಂಗಗಳಿಗನು ಸಾರವಾಗಿ ವಿಂಗಡಿಸಬೇಕು. ಹೀಗೆ ವಿಂಗಡಿಸಿದ ಪ್ರತಿಯೊಂದು ವಿಚಾರದ ಮೇಲೆ ಬೇರೆ ಬೇರೆ ಸಮಾಜಶಾಸ್ತ್ರಜ್ಞರು ತಮ್ಮ ಅಭಿಪ್ರಾಯಗಳನ್ನು ಮುಂದಿಡುವರು. ಇವರ ಅಭಿಪ್ರಾಯಗಳನ್ನು ಪ್ರಬಂಧಗಳ ರೂಪಗಳಲ್ಲಿ ಸೂತ್ರಗಳ ಜೊತೆಗೆ ಸೇರಿಸ ಬಹುದು.

3.1.5 ಹೀಗೆ ವಿವರವಾಗಿ ಪ್ರತಿಯೊಂದು ವಿಚಾರವನ್ನು ಗಮನಿಸಿದ ಮೇಲೆ ಬಹು ಮುಖ್ಯವಾದ ಕೆಲವೊಂದು ವಿಚಾರಗಳನ್ನು ಆರಿಸಿ ಅವುಗಳ ಮೇಲೆ ಯೋಗ್ಯ

ಸೂತ್ರಗಳನ್ನು ರಚಿಸಬೇಕಾಗುವುದು. ಈ ಹೊಸ ಸೂತ್ರಗಳನ್ನು ರಚಿಸುವಾಗ ಸೂತ್ರರಚನೆಯ ಬಗ್ಗೆ ಮೇಲೆ ಹೇಳಿದ ವಿಷಯಗಳನ್ನೇ ಗಮನದಲ್ಲಿಡಬೇಕು. ಈ ವಿಚಾರ–ಸೂತ್ರಗಳು (ಸೂತ್ರಮಾಲೆ) ಜನರ ವಾಸ್ತವ ಪರಿಸ್ಥಿತಿಯ ಸಮಗ್ರ ಚಿತ್ರ ವನ್ನು ಕೊಡುವುವು. ಸೂತ್ರಮಾಲೆಯನ್ನು ತಯಾರಿಸುವಾಗ ಎಲ್ಲಾ ಸೂತ್ರಗಳ ಶಬ್ದಗಳಲ್ಲಿ ಒಂದು ಭಾಷೆಯ ಎಲ್ಲಾ ಅಥವಾ ಬಹು ಮುಖ್ಯ ಅಕ್ಷರಗಳು ಒಳ ಗೊಳ್ಳುವಂತೆ ನೋಡಿಕೊಳ್ಳಬೇಕು.

3.1.6 ಮೇಲೆ ವಿವರಿಸಿದಂತೆ ವಿಸ್ತಾರವಾಗಿ ಜನರ ಮೂಲವಿಚಾರಗಳ ಸಂಶೋಧನೆ ಮಾಡಲಿಕ್ಕೆ ಅವಕಾಶವಿಲ್ಲದಿದ್ದರೆ ಅಥವಾ ಸೌಕರ್ಯಗಳಿಲ್ಲದಿದ್ದರೆ ಒಂದು ಕ್ಷಿಪ್ರ ವಿಧಾನವನ್ನು ಅವಲಂಬಿಸಬಹುದು. ಇದಕ್ಕೋಸ್ಕರ ಸ್ವಲ್ಪ ಸಮಯ ಒಂದು ಪ್ರದೇಶದ ಜನರೊಡನೆ ಬೆರೆತು ಅವರ ಮುಖ್ಯ ವಿಚಾರಗಳನ್ನು ಕಂಡುಹಿಡಿಯಬೇಕಾಗುವುದು, ನಂತರ ಅವುಗಳ ಮೇಲೆ ಸೂಕ್ತ ಸೂತ್ರಗಳನ್ನು ರಚಿಸಿ ಅವುಗಳ ಆಧಾರದ ಮೇಲೆ ಅರಿವಿನ ಜಾಗೃತಿ ಮತ್ತು ಸಾಕ್ಷರತೆಯ ಕಾರ್ಯಕ್ರಮವನ್ನು ರೂಪಿಸಬಹುದು.

## 3.2 ಸೂತ್ರ ವಿವರಣೆ ಮತ್ತು ಅಕ್ಷರಜ್ಞಾನ

3.2.0 ಸೂಕ್ತ ಸೂತ್ರಮಾಲೆಯ ರಚನೆ ಆದ ಮೇಲೆ ಅರಿವಿನ ಜಾಗೃತಿ ಮುಂದಿನ ಮಹತ್ವದ ಹೆಜ್ಜೆಯನ್ನು ಹಾಕಬೇಕಾಗುವುದು. ಸೂತ್ರಗಳನ್ನು ಬೇರೆ ಬೇರೆ ಘಟಕಗಳಲ್ಲಿ ಕಲಿಯುವವರ ಮುಂದಿಟ್ಟು ಅವರಿಂದ ಸೂತ್ರದ ವಿವರಣೆ ಯನ್ನು ಸಂವಾದದ ಮೂಲಕ ಪಡೆಯಬೇಕು.

3.2.1 ಒಂದು ಸೂತ್ರದ ಮೇಲೆ ಎಲ್ಲರೂ ತಮ್ಮ ವಿಚಾರಗಳನ್ನು ವ್ಯಕ್ತಪಡಿಸು ವುದೇ ಸೂತ್ರವಿವರಣೆ (decodification). ವಿಚಾರ ವಿನಿಮಯ ಮಾಡು ವಾಗ ಜನರಿಗೆ ಸೂತ್ರವು ಮೊದಲು ಕೇವಲ ಒಂದು ಸಮಸ್ಯೆಯಾಗಿದ್ದು ಕ್ರಮೇಣ ಅದು ತಮ್ಮದೇ ಒಂದು ಸಮಸ್ಯೆ ಎಂದು ಅರಿವಾಗುವುದು. ನಂತರ ಸಮಸ್ಯೆಯ ಬಗ್ಗೆ ವಸ್ತುನಿಷ್ಠ ವಿಚಾರವಿನಿಮಯವೂ ಅದರ ಶಾಸ್ತ್ರೀಯ ವಿಶ್ಲೇಷಣೆಯೂ ನಡೆಯುವುವು.

ಚರ್ಚಾಕೂಟದಲ್ಲಿ ಸೂತ್ರವು ಕಲಿಯುವ ವಸ್ತುವಾಗಿದ್ದು (knowable object) ತಮ್ಮ ಕಲಿಯುವ ಕಾರ್ಯ(act of knowing) ದಲ್ಲಿ ಕಲಿಯುವವರ

(knowing subjects) – ಪ್ರೇರಕ ಮತ್ತು ಅನಕ್ಷರಸ್ಥ ವಯಸ್ಕರ–ಮಧ್ಯೆ ಸಂಬಂಧವನ್ನೇರ್ಪಡಿಸುತ್ತದೆ. ಸೂತ್ರದ ವಾಸ್ತವಿಕ ಆಧಾರವು (real or concrete context) ವಯಸ್ಕರ ಜೀವನದ ವಸ್ತುನಿಷ್ಠವಾಗಿರುವ ಯಾವುದೋ ಒಂದು ಸಂಗತಿಯಾಗಿರುತ್ತದೆ. ವಯಸ್ಕರ ಚರ್ಚಾಕೂಟವು ಅದರ ಸೈದ್ಧಾಂತಿಕ ಆಧಾರ (theoretical context) ವೆನಿಸುವುದು. ಚರ್ಚಾಕೂಟದಲ್ಲಿ ವಯಸ್ಕರು ಸೂತ್ರವು ತೋರಿಸುವ ತಮ್ಮ ಜೀವನದ ಒಂದು ಅಂಶದ ವಾಸ್ತವ ಚಿತ್ರಣದ ಮುಖಾಂತರ ಆ ಸಂಗತಿಯ ಕಾರಣ (reason)ದ ಬಗ್ಗೆ ಚರ್ಚೆಯಲ್ಲಿ ತೊಡಗುವರು. ಸಂವಾದದ ಮೂಲಕ ನಡೆಯುವ ಕಲಿಯುವ ಕಾರ್ಯವು ಗೂಢವಾಗಿದ್ದಂತೆ, ಒಂದು ವಿಷಯವನ್ನು ಆವರಿಸಿದ್ದ ಮಿಥ್ಯಾಲೋಚನೆಗಳನ್ನು ಭೇದಿಸಿ ಹೆಚ್ಚು ಹೆಚ್ಚಾಗಿ ಅದರ ನಿಜಸ್ವರೂಪವನ್ನು ಅವರು ಬೆಳಕಿಗೆ ತರುವರು. ಈ ರೀತಿಯ ಜ್ಞಾನಕಾರ್ಯ (cognitive operation) ದಿಂದ ಕಲಿಯುವವರು ತಮ್ಮ ಅಸ್ತಿತ್ವದ ಬಗೆಗಿರುವ ಅಭಿಪ್ರಾಯಗಳನ್ನು ವಿವೇಚನಾತ್ಮಕ ಜ್ಞಾನವನ್ನಾಗಿ ಪರಿವರ್ತಿಸಲು ತಕ್ಕರಾಗುವರು.

ಹೀಗೆ ತಾತ್ವಿಕ ಆಧಾರ (ಚರ್ಚಾಕೂಟ)ವು ವಾಸ್ತವ ಸಂಗತಿಗಳನ್ನು ವಿಮರ್ಶಾತ್ಮಕ ವಿಶ್ಲೇಷಣೆ (critical analysis)ಗೆ ಒಳಗಾಗಿಸುವ ಒಂದು ವಿಶಿಷ್ಟ ಸಂದರ್ಭವಾಗಿದೆ. ಒಂದು ವಿಷಯವನ್ನು ಚಿತ್ರಿಸುವ ಸೂತ್ರವು ಕಲಿಯಬೇಕಾದ ವಸ್ತು (knowable object) : ಸೂತ್ರವಿವರಣೆ (ಅಂದರೆ ಸೂತ್ರದಲ್ಲಿ ಬಂದ ಇಡೀ ವಿಷಯವನ್ನು ವಿಭಜಿಸಿ, ವಿಶ್ಲೇಷಿಸಿ, ಅದರ ನಿಜರೂಪವನ್ನು ಕಂಡುಹಿಡಿದು, ಪುನಃ ಅವನ್ನು ಒಂದಾಗಿಸುವ ಕೆಲಸ) ಎಂಬುದು ಕಲಿಯುವವರು (knowing subjects) ಕಲಿಯಲು ಪ್ರಯೋಗಿಸುವ ಪ್ರಕ್ರಿಯೆ (process) ಆಗಿದೆ. ಈ ಕ್ರಿಯೆಯಲ್ಲಿ ಸಂವಾದ ಅತ್ಯವಶ್ಯಕ.

3.2.2 ಜನರ ಪ್ರಗತಿಯನ್ನು ಪ್ರತಿಬಂಧಿಸುವ ಸಂಗತಿಗಳ ಬಗ್ಗೆ ವಸ್ತುನಿಷ್ಠ ವಿಚಾರ ನಡೆದ ಮೇಲೆ ಸೂತ್ರದಲ್ಲಿ ತೋರಿದ ಸಮಸ್ಯೆಯನ್ನು ಹೋಗಲಾಡಿಸಲು ಮಾಡಬೇಕಾದ ಕೆಲಸದ ಬಗ್ಗೆ ವಿವೇಚನೆಯಾಗುವುದು ಮತ್ತು ಸಮಯಕ್ಕನುಸಾರವಾಗಿ ಯೋಗ್ಯ ಕಾರ್ಯಗಳನ್ನು ಮಾಡಲು ಜನರು ತೊಡಗುವರು.

3.2.3 ಸಮಸ್ಯೆಯನ್ನು ಬಗೆಹರಿಸಲು ಕೈಗೊಳ್ಳುವ ಕೃತಿಯಲ್ಲಿ ಸಾಕ್ಷರತೆಯ ಅಗತ್ಯವೂ ಮನದಟ್ಟಾಗುವುದು. ಒಂದು ಸಮಸ್ಯೆಯ ಬಗ್ಗೆ ಆಳವಾದ ಚರ್ಚೆ ನಡೆದು ಅದನ್ನು ಬಗೆಹರಿಸಲು ಕೈಗೊಳ್ಳಬೇಕಾದ ಕಾರ್ಯಕ್ರಮ ಇತ್ಯರ್ಥವಾದ

ಮೇಲೆ ಸೂತ್ರದ ವಿಷಯವನ್ನು ಶಬ್ದರೂಪದಲ್ಲಿ ಕಪ್ಪುಹಲಗೆಯ ಮೇಲೆ ಬರೆದು ತೋರಿಸಲಾಗುವುದು. ಅದನ್ನು ಮೊದಲು ಓದಲು ಕಲಿತು ನಂತರ ಬರೆಯಲು ಜನರು ಕಲಿಯುವರು. ಸಮಸ್ಯೆಯ ಬಗ್ಗೆ ಎಲ್ಲರೂ ಚರ್ಚೆ ಮಾಡಿದ್ದರಿಂದ ಅವರ ಆಸಕ್ತಿ ಕೆರಳಿದ್ದು, ಸಮಸ್ಯೆಯನ್ನು ತೋರಿಸಿಕೊಡುವ ಶಬ್ದವನ್ನು ಶೀಘ್ರವಾಗಿ ಓದಲೂ ಬರೆಯಲೂ ಅವರು ಶಕ್ತರಾಗುವರು. ಕಲಿತ ಶಬ್ದದ ಅಕ್ಷರಗಳು ಮನ ದಟ್ಟಾಗಲು ಆ ಅಕ್ಷರಗಳಿಂದ ಬೇರೆ ಶಬ್ದಗಳನ್ನು ಜನರಿಂದಲೇ ಕೇಳಿಸಿ ಬರೆಯಿಸ ಬಹುದು. ಈ ರೀತಿ ಮೂಲಶಬ್ದದಿಂದ ಬೇರೆ ಬೇರೆ ಶಬ್ದಗಳನ್ನು ಜೋಡಿಸಬಹು ದಾದ್ದರಿಂದ ಮೂಲಶಬ್ದವನ್ನು ಜನಕಶಬ್ದ (generative word) ಎಂತಲೂ ಉಳಿದವನ್ನು ಜನ್ಯಶಬ್ದಗಳೆಂತಲೂ ಕರೆಯಬಹುದು.

ಈ ರೀತಿಯ ಅಕ್ಷರಜ್ಞಾನ ಕೇವಲ ಯಾಂತ್ರಿಕವಾಗಿರದೆ ಕಲಿಯುವುದರಲ್ಲಿ ಜನರಿಗೆ ಹುಮ್ಮಸ್ಸು ಇರುವುದು.

## 4. ಫ್ರೈರೆ ಮಾಡಿದ ಪ್ರಯೋಗಗಳು

4.1 ಫ್ರೈರೆ ಮತ್ತು ಅವರ ಸಂಗಡಿಗರು (ಒಬ್ಬ ಶಿಕ್ಷಣಶಾಸ್ತ್ರಜ್ಞ, ಒಬ್ಬ ಸಮಾಜಶಾಸ್ತ್ರಜ್ಞ, ಒಬ್ಬ ಮನೋವಿಜ್ಞಾನಿ) ತಾವು ಕಾರ್ಯ ಮಾಡಬೇಕಾಗಿರುವ ಜಾಗಕ್ಕೆ ಹೋಗಿ, ಅಲ್ಲಿಯ ಜನರೊಡನೆ ಬೆರೆತು, ಅವರ ಜೀವನ ಹಾಗೂ ಪದ್ಧತಿ ಗಳ ಪರಿಚಯ ಮಾಡಿಕೊಂಡರು. ತಮ್ಮ ಸಂಪರ್ಕದಿಂದ ಜನರ ಜೀವನದ ಮಹ ತ್ವದ ವಿಚಾರಗಳನ್ನೂ ಅವುಗಳನ್ನು ಸೂಚಿಸುವ ಶಬ್ದಗಳನ್ನೂ ಕಂಡುಕೊಂಡರು. ಹೀಗೆ ತಯಾರಾದ ಪಟ್ಟಿಯಿಂದ ಹದಿನೇಳು ಜನಕಶಬ್ದಗಳನ್ನು ಆರಿಸಿದರು. ಈ ಶಬ್ದಗಳು ಭಾಷೆಯ ವಿವಿಧ ಉಚ್ಚಾರಗಳನ್ನೂ ಲಿಪಿಯ ಎಲ್ಲಾ ಅಕ್ಷರಗಳನ್ನೂ ಒಳಗೊಂಡಿರುವಂತೆ ನೋಡಿಕೊಂಡರು. ಆ ಶಬ್ದಗಳು ಹೀಗಿವೆ : ಕೊಳಗೇರಿ, ಮಳೆ, ನೇಗಿಲು, ಭೂಮಿ, ಆಹಾರ, ಕುಣತ, ಬಾವಿ, ಸೈಕಲ್ಲು, ಕೆಲಸ, ವೇತನ, ಕಸುಬು, ಸರಕಾರ, ಕೊಳಚೆಗೇರಿ ವಾಸಿಗರು, ಸಕ್ಕರೆ ಕಾರ್ಖಾನೆ, ಬ್ಯಾಂಕ್, ಇಟ್ಟಿಗೆ ಮತ್ತು ಶ್ರೀಮಂತಿಕೆ. ಈ ಶಬ್ದಗಳಿಗನುಸಾರವಾಗಿ ರಚಿಸಿದ ಚಿತ್ರ ಅಥವಾ ಸ್ಥಿರ ಚಿತ್ರಗಳನ್ನು ಸೂತ್ರಗಳೆಂದು ಕರೆಯಲಾಯಿತು.

4.2 ಕಲಿಯುವವರ ಮುಂದೆ ಈ ಸೂತ್ರಗಳನ್ನು ಇಟ್ಟು ಸಂವಾದದ ಮೂಲಕ ಜನರ ಸಮಸ್ಯೆಗಳ ವಾಸ್ತವ ಸ್ವರೂಪದ ವಿಶ್ಲೇಷಣೆ ನಡೆಯಿತು. ಉದಾ ಹರಣೆಗಾಗಿ :–

ಕೊಳಚೆಗೇರಿ : ಜನರು ಯಾವ ರೀತಿಯಲ್ಲಿ ಅಲ್ಲಿ ವಾಸಿಸುತ್ತಾರೆ ? ಜನರಿಗೆ ಬೇಕಾದ ಅತ್ಯವಶ್ಯಕತೆಗಳೇನು ?

ಮಳೆ : ಬೇಸಾಯಕ್ಕೆ ಮಳೆಯ ಅವಶ್ಯಕತೆ - ರೈತರು ನಿಸರ್ಗದ ಮೇಲೆ ಎಷ್ಟು ಹೊಂದಿಕೊಂಡಿದ್ದಾರೆ ? ಇದನ್ನು ಬದಲಾಯಿಸಬಹುದೋ ? ಹೇಗೆ ?

ನೇಗಿಲು : ಕೆಲಸದ ಪ್ರಾಮುಖ್ಯತೆ – ಬಂಡವಾಳ ಹೆಚ್ಚು ಮುಖ್ಯವೋ, ಕೆಲಸ ಹೆಚ್ಚು ಮುಖ್ಯವೋ ? ಏಕೆ ?

ಭೂಮಿ : ಭೂಸಂಧಾರಣೆಗಳು, ನೀರಾವರಿ, ದೇಶದ ಸಂಪನ್ಮೂಲಗಳ ಬಳಕೆ.

ಆಹಾರ : ಪೌಷ್ಟಿಕ ಆಹಾರದ ಅಭಾವ – ಹಸಿವು, ಬಾಲ್ಯಮರಣ, ರೋಗ.

ಕಣಿತ : ಜನಸಾಮಾನ್ಯರ ಸಂಸ್ಕೃತಿ - ಸುಶಿಕ್ಷಿತರ ಸಂಸ್ಕೃತಿ; ಸ್ಥಳೀಯ ಸಂಸ್ಕೃತಿ– ಪರಕೀಯ ಸಂಸ್ಕೃತಿ.

ಬಾವಿ : ಕುಡಿಯುವ ನೀರಿನ ಪೂರೈಕೆ, ನೀರಿನಿಂದ ಹಬ್ಬುವ ರೋಗಗಳು, ಶುಚಿತ್ವದ ಬಗ್ಗೆ ತಿಳುವಳಿಕೆ.

ಸೈಕಲ್ಲು : ಸಾರಿಗೆಯ ಕೊರತೆ – ಜನಸಾಮಾನ್ಯರಿಗೆ ಸಾರಿಗೆ ಅವಶ್ಯಕತೆ ಈಡೇರಿ ಸಲು ಏನು ಮಾಡಬೇಕು ?

ಕೆಲಸ : ಕೈಕೆಲಸಕ್ಕೂ ಬುದ್ಧಿ ಕೆಲಸಕ್ಕೂ ಸಿಗುವ ಮನ್ನಣೆ – ಏಕೆ ಈ ವ್ಯತ್ಯಾಸ ?

ವೇತನ : ಕನಿಷ್ಠ ಕೂಲಿ ಎಷ್ಟು ? ಇದು ಸಿಗುತ್ತದೋ ? ಕೂಲಿ/ವೇತನದ ಬಗ್ಗೆ ಇರುವ ಕಾನೂನುಗಳು ನ್ಯಾಯಸಮ್ಮತವೋ ?

ಕುಟುಂಬ : ಸಾಮಾಜಿಕ ವರ್ಗಗಳು, ಟ್ರೇಡ್‌ಯೂನಿಯನ್‌ಗಳು, ಮುಷ್ಕರಗಳು.

ಸರಕಾರ : ಅಧಿಕಾರ ಯಾರ ಕೈಯಲ್ಲಿದೆ ? ಜನರು ಸರಕಾರದಲ್ಲಿ ಭಾಗವಹಿಸು ತ್ತಾರೆಯೆ ?

ಕೊಳಚೆಗೇರಿ ವಾಸಿಗರು : ಸಮಾಜ ಕಲ್ಯಾಣ ಯೋಜನೆಗಳು ಜನರಿಗೆ ಏನಾದರೂ ಉಪಯೋಗ ನೀಡುತ್ತವೆಯೋ ? ಏಕೆ ? ಜನರು ಕಾರ್ಯತತ್ಪರ ರಾಗುವಂತೆ ಏನು ಮಾಡಬಹುದು ?

ಸಕ್ಕರೆ ಕಾರ್ಖಾನೆ : ಸಣ್ಣ ಕೈಗಾರಿಕೆಗಳು – ಏಕೆ ಬ್ರೆಝಿಲ್‌ನಲ್ಲಿ ಒಂದೇ ಜಾತಿಯ ಉತ್ಪನ್ನ ? ಇದರಲ್ಲಿ ಬದಲಾವಣೆ ಸಾಧ್ಯವೋ ?

ಬ್ಯಾಂಕು : ಯಾರಿಗೆ ಹಣದ ಸವಲತ್ತು ಸಿಗುತ್ತದೆ ? ಎಂತಹ ತಾಂತ್ರಿಕ ವಿಜ್ಞಾನಕ್ಕೆ/ಕೈಗಾರಿಕೆಗಳಿಗೆ ಪುರಸ್ಕಾರ ಸಿಗುತ್ತದೆ ?

ಇಟ್ಟಿಗೆ : ಪಟ್ಟಣದ ಸುಧಾರಣೆ, ಯೋಜನೆ ; ಬೇರೆ ಬೇರೆ ಸುಧಾರಣೆಗಳ ಅಂತಸ್ಸಂಬಂಧ.

ಶ್ರೀಮಂತಿಕೆ : ಶ್ರೀಮಂತ ಹಾಗೂ ಬಡವರ ಮಧ್ಯದ ಸಂಬಂಧ, ಶ್ರೀಮಂತ ಹಾಗೂ ಬಡ ರಾಷ್ಟ್ರಗಳ ನಡುವಣ ಸಂಬಂಧ-ಯಾವ ರೀತಿಯಲ್ಲಿ ಈ ಪರಿಸ್ಥಿತಿಯನ್ನು ಬದಲಾಯಿಸಬಹುದು ? ರಾಷ್ಟ್ರೀಯ ವಿಮೋಚನೆ ಹೇಗೆ ಸಾಧ್ಯ ? ಅನುದಾನಗಳ ಮೂಲಕವೋ ?

4.3 ಒಂದು ಸಮಸ್ಯೆಯು ಅರಿವಾದ ಮೇಲೆ ಆ ಸೂತ್ರವನ್ನು ಬದಿಗಿರಿಸಿ, ಸೂತ್ರವು ವ್ಯಕ್ತಮಾಡುವ ಶಬ್ದವನ್ನು ಬರೆದು ತೋರಿಸಲಾಯಿತು. ಮೊದಲು ಇಡೀ ಶಬ್ದವನ್ನು ಓದಿಸಿ ನಂತರ ಅದರಲ್ಲಿಯ ಅಕ್ಷರಗಳ ಜ್ಞಾನವನ್ನು ಕೊಡಲಾಯಿತು. ಮೂಲಶಬ್ದದ ಅಕ್ಷರಗಳಿಂದ ಇತರ ಶಬ್ದಗಳನ್ನು ರಚಿಸಿ ಕಲಿತ ಅಕ್ಷರಗಳ ಸ್ಪಷ್ಟಜ್ಞಾನ ಬರುವಂತೆ ಮಾಡಲಾಯಿತು.

ಉದಾಹರಣೆಗಾಗಿ : ಪಾಉಲೊ ಫ್ರೆಇರೆಯವರು ಸಿದ್ಧಪಡಿಸಿದ ಸೂತ್ರಮಾಲೆಯ ಮೊದಲಿನ ವಿಷಯ ಕೊಳಚೆಗೇರಿಗೆ ಸಂಬಂಧಪಟ್ಟದ್ದು. ಆ ವಿಷಯದ ಸೂತ್ರದಲ್ಲಿ ಬರುವ ಶಬ್ದ ಪೋರ್ಚುಗೀಸ್ ಭಾಷೆಯಲ್ಲಿ favela ಎಂದಿರುತ್ತದೆ. ಸೂತ್ರವನ್ನು ತೋರಿಸಿದ ಮೇಲೆ ವಯಸ್ಕರು ಆ ಸೂತ್ರವನ್ನು ತೋರಿಸುವ ವಿಷಯದ ಮೇಲೆ ಚರ್ಚೆ ಮಾಡುವಂತೆ ಪ್ರೇರಕನು ನೋಡಿಕೊಂಡನು. ಕೊಳಚೆಗೇರಿ ಸಮಸ್ಯೆಯ ಬಹುಮುಖ ಪರಿಚಯವಾದ ಮೇಲೆ ಪ್ರೇರಕನು ಕೇವಲ favela ಎಂದು ಬರೆದಿರುವ ಸ್ಥಿರಚಿತ್ರವನ್ನು ತೋರಿಸಿ "ನಾವು ಇದುವರೆಗೆ ಚರ್ಚೆ ಮಾಡುತ್ತಿದ್ದ ಕೊಳಚೆಗೇರಿಯ ಶಬ್ದರೂಪ ಇದು" ಎಂದು ಸ್ಪಷ್ಟಪಡಿಸಿದನು. ಮತ್ತೊಂದು ಸ್ಥಿರಚಿತ್ರದಲ್ಲಿ ಶಬ್ದವನ್ನು ಉಚ್ಚಾರಣೆ ಮಾಡುವ ಘಟಕ/ಚೂರುಗಳಿಗನುಗುಣವಾಗಿ ಬಿಡಿಬಿಡಿಯಾಗಿ ಬರೆದಿರುವುದನ್ನು ತೋರಿಸಿದನು : FA VE LA.

ನಂತರ ಮೊದಲ ಘಟಕವನ್ನು ತೆಗೆದುಕೊಂಡು ಅದನ್ನು ವಯಸ್ಕರು ಓದುವಂತೆಯೂ ಬರೆಯುವಂತೆಯೂ ನೋಡಿಕೊಂಡನು. ಇದಾದಮೇಲೆ ಅದೇ ಘಟಕದಲ್ಲಿ

ಪೋರ್ಚುಗೀಸ್ ಭಾಷೆಯ ಉಳಿದ ಸ್ವರಗಳು ಸೇರುವಂತೆ ಸಿದ್ಧಪಡಿಸಿದ ಇನ್ನೊಂದು ಸ್ವರಚಿತ್ರವನ್ನು ತೋರಿಸಿದನು : FA, FE, FI, FO, FU. ಈ ಘಟಕಗಳು ಒಂದರ ಕೆಳಗೆ ಒಂದರಂತೆ ಬರೆದಿದ್ದವು. ಈ ಹಂತದಲ್ಲಿ ಹೊಸ ಸ್ವರಗಳ ಜ್ಞಾನವನ್ನು ಒಂದು ಸಮಸ್ಯೆಯ ರೂಪದಲ್ಲಿ ಪ್ರೇರಕನು ವಯಸ್ಕರ ಮುಂದಿಟ್ಟನು. ಅದಕ್ಕಾಗಿ ಎರಡು ಮಹತ್ವದ ಪ್ರಶ್ನೆಗಳನ್ನು ಕೇಳಿದನು. ಮೊದಲನೆಯ ಪ್ರಶ್ನೆ—"ಈ ಚೂರು (ಘಟಕ) ಗಳಲ್ಲಿ ಒಂದೇ ರೀತಿಯಾಗಿರುವ ಮತ್ತು ಬೇರೆ ಬೇರೆ ರೀತಿಯಾಗಿರುವ ಯಾವುದಾದರೂ ಅಂಶಗಳು ಇವೆಯೋ?" ವಯಸ್ಕರು ಕೆಲವು ಕಾಲದ ಸಂಶಯಾತ್ಮಕ ಮೌನದ ನಂತರ ಈ ರೀತಿ ಹೇಳಿದರು : "ಈ ಎಲ್ಲಾ ಚೂರುಗಳು ಒಂದೇ ರೀತಿಯಲ್ಲಿ ಶುರುವಾಗುತ್ತವೆ. ಆದರೆ ಬೇರೆ ಬೇರೆ ರೀತಿಯಲ್ಲಿ ಅಂತ್ಯಗೊಳ್ಳುತ್ತವೆ". ನಂತರ ಪ್ರೇರಕನು ಕೇಳಿದ್ದೇನೆಂದರೆ—"ಈ ಚೂರುಗಳು ಒಂದೇ ರೀತಿಯಾಗಿ ಶುರುವಾಗಿ ಬೇರೆಬೇರೆ ರೀತಿಯಲ್ಲಿ ಕೊನೆಗೊಂಡರೆ ನಾವು ಅದನ್ನು FA ಎಂತಲೇ ಕರೆಯಬಹುದೋ?" ವಯಸ್ಕರು ಪುನಃ ಕೆಲವು ನಿಮಿಷ ಮೌನ ತಾಳಿ ಪ್ರಯಾಸಪೂರ್ವಕವಾಗಿ "ಇಲ್ಲ" ಎಂದು ಉತ್ತರ ಕೊಟ್ಟರು. ಒಂದರ ಕೆಳಗೆ ಒಂದರಂತೆ ಬರೆದಿದ್ದ 'F' ಅಕ್ಷರದಿಂದ ಆರಂಭವಾಗಿ ಐದು ಸ್ವರಗಳಿಂದ ಅಂತ್ಯವಾಗುವ ಚೂರುಗಳನ್ನು ವಯಸ್ಕರು ಅಡ್ಡವಾಗಿಯೂ ನೇರವಾಗಿಯೂ ಓದುವಂತೆ ಪ್ರೇರಕನು ನೋಡಿಕೊಂಡನು ಮತ್ತು ಐದು ಸ್ವರಗಳನ್ನು ಅವರು ಬರೆಯುವಂತೆಯೂ ಮಾಡಿದನು. ಈ ರೀತಿ ಸ್ವರಗಳ ಜ್ಞಾನವನ್ನು ಒಂದು ಸಮಸ್ಯೆಯನ್ನು ಬಗೆಹರಿಸುವುದರ ಮೂಲಕ ವಯಸ್ಕರೇ ಕಂಡುಕೊಳ್ಳುವಂತೆ ಪ್ರೇರಕನು ಕಾರಣನಾದನು. ಇದೇ ಪ್ರಕಾರ ಉಳಿದಿದ್ದ ಎರಡು ಚೂರುಗಳ (VE, LA) ಪರಿಚಯವೂ ಆಯಿತು.

ಮೂರು ಘಟಕಗಳ ಮತ್ತು ಐದು ಸ್ವರಗಳ ಪರಿಚಯ ಆದ ಮೇಲೆ ಪ್ರೇರಕನು ಇನ್ನೊಂದು ಪ್ರಶ್ನೆ ಕೇಳಿ ಭಾಷೆಯ ಬಗೆಗಿರುವ ಮತ್ತೊಂದು ಗಂಟನ್ನು ವಯಸ್ಕರೇ ಕಂಡುಹಿಡಿಯುವಂತೆ ಮಾಡಿದನು. ಈ ಪ್ರಶ್ನೆ ಹೀಗಿದೆ : "ಈ ಚೂರುಗಳಿಂದ ನಾವೇನಾದರೂ ಮಾಡಬಹುದೆಂದು ನಿಮಗನಿಸುತ್ತದೋ?" ಇಲ್ಲಿಯೂ ಕೂಡ ವಯಸ್ಕರು ಕೆಲವು ಹೊತ್ತು ಮೌನ ತಾಳಿ ನಿಧಾನವಾಗಿ ಆ ಅಕ್ಷರಗಳನ್ನು ಬೇರೆ ಬೇರೆ ರೀತಿಯಲ್ಲಿ ಕೂಡಿಸಿ ಹೊಸ ಹೊಸ ಶಬ್ದಗಳನ್ನು ಕಂಡುಹಿಡಿದರು : FAVELA, FAVO, FIVELA, LUVA, LI, VALE, VALA, VIVA, FALO, FALE, FE, FAVA, VILA, LAVA, VEVE, VELA, VIVE, VIVO, FALAVA ಇತ್ಯಾದಿ.

ಹೀಗೆ ನಾಲ್ಕೈದು ಜನಕಶಬ್ದಗಳನ್ನು ಕಲಿತ ಮೇಲೆ ಇಪ್ಪತ್ತರವರೆಗೆ ಕೂಡು ಹಿಡಿದ ನೂರು ಶಬ್ದಗಳಿಂದ ಕೆಲವು ಸಣ್ಣಪುಟ್ಟ ವಾಕ್ಯಗಳನ್ನು, ಬಿಡಿ ಮಾತುಗಳನ್ನೂ ರಚಿಸಲಿಕ್ಕೆ ವಯಸ್ಕರು ತೊಡಗಿದರು.

4.4 ಶಿಕ್ಷಣದ ಗುರಿ ಮನುಷ್ಯನಿಗೆ ತನ್ನ ಪರಿಸರವನ್ನು ಯೋಗ್ಯ ರೀತಿಯಲ್ಲಿ ಬದಲಾಯಿಸುವಲ್ಲಿ ನೆರವಾಗುವುದು. ಸಾಕ್ಷರತೆಯು ಪರಿಸ್ಥಿತಿಯನ್ನು ಬದಲಿಸುವ ಒಂದು ಸಾಧನ ಎಂದು ತೋರಿಸಿಕೊಡಲೂ ವಿವಿಧ ಸೂತ್ರಗಳನ್ನು ಫ್ರೈರೆಯು ಬಳಸಿದ್ದನು. ಉದಾಹರಣೆಗಾಗಿ, ಹೊಲ ಎಂಬ ಒಂದು ಸ್ಥಿರಚಿತ್ರದಲ್ಲಿ ಮಾನವ ಹಾಗೂ ಪ್ರಾಣಿಗಳ ಅಂತರವನ್ನು ತೋರಿಸಿ ಮಾನವನು ಶಿಕ್ಷಣದಿಂದ ಏನನ್ನು ಸಾಧಿಸಬಹುದು ಎಂದು ತೋರಿಸಿಕೊಟ್ಟನು. ಚಿತ್ರದಲ್ಲಿ ಒಂದು ಮನೆ; ಅದರ ಪಕ್ಕದಲ್ಲಿ ಒಂದು ಬಾವಿ; ಅದರ ಹತ್ತಿರ ಒಬ್ಬ ಮನುಷ್ಯ; ಮನುಷ್ಯನ ಒಂದು ಕೈಯಲ್ಲಿ ಕೊಡಲಿ, ಇನ್ನೊಂದರಲ್ಲಿ ಪುಸ್ತಕ; ಮನೆಯ ಇನ್ನೊಂದು ಪಕ್ಕದಲ್ಲಿ ಗಿಡ; ಆಕಾಶದಲ್ಲಿ ಪಕ್ಷಿ; ಪಕ್ಕದ ತಿಪ್ಪೆಯಲ್ಲಿ ಹಂದಿ ಇದ್ದವು. ಚರ್ಚೆಯ ಮುಖಾಂತರ ಮನುಷ್ಯ—ಪ್ರಾಣಿಗಳ ಭೇದ ತೋರಿಸಿ, ಮನುಷ್ಯ ತನ್ನ ಶಿಕ್ಷಣದಿಂದ ತನ್ನ ಪರಿಸರವನ್ನು ತನ್ನ ಬೇಡಿಕೆಗಳಿಗೆ ತಕ್ಕಂತೆ ಅಳವಡಿಸಬಹುದು ಎಂದು ಖಚಿತಪಡಿಸಿದನು.

## 5. ಫ್ರೈರೆಯ ಶಿಕ್ಷಣಪದ್ಧತಿಯ ಇತಿಮಿತಿಗಳು

ಅನಕ್ಷರತೆಯನ್ನು ಹೋಗಲಾಡಿಸುವಲ್ಲಿ ಫ್ರೈರೆಯ ಶಿಕ್ಷಣಪದ್ಧತಿ ಅತ್ಯಂತ ಸಾರ್ಥಕವಾಗಿದೆ. ಯುನೆಸ್ಕೊವು ಚಿಲಿ ದೇಶವನ್ನು ಅನಕ್ಷರತೆಯ ಸವಾಲನ್ನು ಅತ್ಯಂತ ಸಮರ್ಪಕ ರೀತಿಯಲ್ಲಿ ಎದುರಿಸಿದ ಐದು ರಾಷ್ಟ್ರಗಳಲ್ಲಿ ಒಂದಾಗಿ ಪರಿಗಣಿಸಿತ್ತು.

5·1 ಫ್ರೈರೆಯ ಶಿಕ್ಷಣ ಪದ್ಧತಿಯ ಧ್ಯೇಯಗಳು ವ್ಯಾಪಕವೂ ಮಹತ್ತರವೂ ಆಗಿವೆ. ಸಾಕ್ಷರತೆಯ ಮೂಲಕ ಹತ್ತಿಕ್ಕಿದ ಜನರ ಮಾನವೀಕರಣ ಹಾಗೂ ದೇಶದ ಸಾಮಾಜಿಕ ಮತ್ತು ಆರ್ಥಿಕ ಬೆಳವಣಿಗೆ ಸಾಧಿಸುವ ಉದಾತ್ತ ಧ್ಯೇಯವನ್ನು ಈ ಶಿಕ್ಷಣಪದ್ಧತಿ ಇಟ್ಟುಕೊಂಡಿದೆ. ಅದರ ವಿಧಾನಗಳು ವಯಸ್ಕರ ಮನೋಭಾವವನ್ನು ಗೌರವಿಸುತ್ತವೆ : ಉದಾಹರಣೆಗಾಗಿ, ಸಂವಾದ; ಸೂತ್ರಗಳನ್ನು ಜನರ ಜೀವನ ಅಥವಾ ಸಮಸ್ಯೆಗಳಿಂದಲೇ ಆರಿಸುವುದು ಇತ್ಯಾದಿ. ಶಿಕ್ಷಣವು ಜನರ ಸಮಸ್ಯೆಗಳನ್ನು ಬಗೆಹರಿಸುವಲ್ಲಿ ಕೇಂದ್ರೀಕರಿಸಿದ್ದು ಜನರ ಮನಸ್ಸನ್ನೂ ಆಸಕ್ತಿಯನ್ನೂ ಕೆರಳಿಸುವಂತಿದೆ. ವಯಸ್ಕರು ಶಿಕ್ಷಣದ ಪ್ರತಿ ಹಂತದಲ್ಲೂ ಭಾಗವಹಿಸುವಂತೆ ಮಾಡುತ್ತದೆ.

5.2 ಆದರೆ ಫ್ರೀರೆಯ ಶಿಕ್ಷಣ ಪದ್ಧತಿ ಅಷ್ಟೊಂದು ಸುಲಭವಾದುದಲ್ಲ.

5.2.1 ವಯಸ್ಕರ ಆಸಕ್ತಿಯನ್ನು ಕೆರಳಿಸಿ ಸಾಕ್ಷರತೆಯ ಬಗ್ಗೆ ಅದನ್ನು ಸದಾ ಒಂದು ಮಟ್ಟದಲ್ಲಿ ಇಡುವಂತೆ ಮಾಡುವುದು ತುಂಬಾ ಕಷ್ಟಕರ, ಅಭಿಮಾನ ಶೂನ್ಯ ಹಾಗೂ ಬೇರೆಯವರ ಆಜ್ಞೆಗಳನ್ನು ಪಾಲಿಸುವಲ್ಲಿ ಸದಾ ತಯಾರಿರುವ ಜನರು ಒಮ್ಮೆಲೆ ಸಮಾನತ್ವ ತತ್ವಗಳ ಮೇಲೆ ವರ್ತಿಸುವಂತೆ ಮಾಡುವುದು ಕಷ್ಟದ ಸಂಗತಿ.

5.2.2 ಫ್ರೀರೆಯ ಶಿಕ್ಷಣಪದ್ಧತಿಯನ್ನು ಅಳವಡಿಸಲು ಬಹಳಷ್ಟು ಪೂರ್ವ ಸಿದ್ಧತೆ ಬೇಕು. ಜನರ ಸಾಮಾಜಿಕ, ಆರ್ಥಿಕ, ರಾಜಕೀಯ ಪರಿಸ್ಥಿತಿಗಳ ಸಂಪೂರ್ಣ ಜ್ಞಾನವಿರಬೇಕು. ಅವುಗಳನ್ನು ವಿಶ್ಲೇಷಿಸುವ ಸಾಮರ್ಥ್ಯವಿರಬೇಕು.

5.2.3 ವಯಸ್ಕರ ಶಿಕ್ಷಕ ಅಥವಾ ಸಂಘಟಕ ಅಥವಾ ಪ್ರೇರಕ ಬಹಳ ಕುಶಲ ನಾಗಿರಬೇಕು. ಅವನು ಫ್ರೀರೆಯ ಶಿಕ್ಷಣಪದ್ಧತಿಯ ತತ್ವಜ್ಞಾನಗಳನ್ನು ಸಂಪೂರ್ಣ ವಾಗಿ ಅರ್ಥಮಾಡಿಕೊಂಡಿರಬೇಕು. ಫ್ರೀರೆಯ ಶಿಕ್ಷಣಪದ್ಧತಿಯಲ್ಲಿ ತರಬೇತಿ ಪಡೆ ದಿದ್ದರೂ ಪ್ರಚಲಿತ ಶಿಕ್ಷಣಪದ್ಧತಿಯಂತೆ ಪಾಠ ನಡೆಸುವ ಆಕರ್ಷಣೆ ಹೆಚ್ಚು. ಸಂವಾದದ ಬದಲು, 'ಸುಲಭ' ರೀತಿಯ ಪಾಠ ಹೇಳಿಕೊಡುವ ವ್ಯವಸ್ಥೆ ಬಹಳ ಸಮಂಜಸ ಎಂದು ಪ್ರೇರಕನಿಗೆ ಅನಿಸಬಹುದು.

5.3 ಹೀಗಿದ್ದರೂ ವಯಸ್ಕರ ಶಿಕ್ಷಣದಲ್ಲಿ ಅರಿವಿನ ಜಾಗೃತಿಯ ಪದ್ಧತಿಯನ್ನೇ ಬಳಸುವುದು ಹೆಚ್ಚು ಸೂಕ್ತ. ಕೇವಲ ಸಾಕ್ಷರತೆಗೆ ಮಹತ್ವ ಕೊಡದೆ ಸಾಕ್ಷರತೆಯ ಮೂಲಕ ಭಾರತದೇಶದ ಬಡತನ ಹಾಗೂ ಇತರ ಸಾಮಾಜಿಕ ಸಮಸ್ಯೆಗಳನ್ನು (ಉದಾ : ಜಾತಿಭೇದ, ಅಂಧಶ್ರದ್ಧೆ) ಹೋಗಲಾಡಿಸುವಲ್ಲಿ ತರುಣ ವಯಸ್ಕರನ್ನು ಅರಿವಿನ ಜಾಗೃತಿ ಉದ್ಯುಕ್ತರನ್ನಾಗಿ ಮಾಡಬಲ್ಲದು.

ಗ್ರಂಥಋಣ : —

Paulo Freire :

Pedagogy of the Oppressed [Hammondsworth, Middlesex, England, 1982 (1972), Penguin Books Ltd.). Cultural Action for Freedom (Penguin Books

Ltd., Hammondsworth, Middlesex, England, 1975, (1972, Harvard Educational Review, USA, 1970).

**S. Arthur Lloyd :**

Paulo Freire and Adult Education, A paper presented at the Consultation on Colleges and Adult Education, Serial No. 10 AICUF/46/2-1978.

**ಶರದ ಕುಲಕರ್ಣಿ :**

ಅರಿವಿನ ಜಾಗೃತಿ

(ಅನು : ಪ್ರಭಾಕರ ನಾನಾವಟಿ), ಜನ ಜಾಗರಣ, ೨೦, ಮಿಲ್ಕಮನ ಸ್ಟ್ರೀಟ್, ಕ್ಯಾಂಪ್, ಬೆಳಗಾಂವ, 1979)

**ಎಸ್. ಆರ್. ರಾಮಸ್ವಾಮಿ :**

"ವಿಶ್ಲೇಷಣೆ, ಸ್ವಶಿಕ್ಷಣ, ಪರಿವರ್ತನೆ", ಉತ್ಥಾನ, ಸೆಪ್ಟೆಂಬರ್, 1982, ಪುಟಗಳು 13–16.

"ಶೋಷಿತರ ಸ್ವಶಿಕ್ಷಣ, ಅಭ್ಯುದಯದ ಅಡಿಗಲ್ಲು", ವಿಕ್ರಮ, ವಿಜಯ ದಶಮಿ ವಿಶೇಷಾಂಕ, 1983, ಪುಟಗಳು 185–191.

—o—

# ಕರ್ನಾಟಕದ ಹಳ್ಳಿಗಳಿಗೆ ಅನ್ವಯಿಸುವಂತೆ ಅರಿವಿನ ಜಾಗೃತಿ ಮತ್ತು ಸಾಕ್ಷರತೆ

ಒಬ್ಬ ಪ್ರೇರಕನು ಒಂದು ಹಳ್ಳಿಯಲ್ಲಿ ವಯಸ್ಕರ ಕೂಟವನ್ನೇರ್ಪಡಿಸಿ ಸಂವಾದದ ಮೂಲಕ ಅರಿವಿನ ಜಾಗೃತಿಯನ್ನೂ ಕೂಟದ ಅನಕ್ಷರಸ್ಥರು ಅಕ್ಷರ ಜ್ಞಾನವನ್ನೂ ಪಡೆಯುವಂತೆ ಮಾಡುವ ಕಾರ್ಯದ ವಿವಿಧ ಹಂತಗಳು ಹೀಗಿವೆ :

1. ಸೂತ್ರೀಕರಣ – ಸೂತ್ರಮಾಲೆಯ ರಚನೆ
2. ಸೂತ್ರ ವಿವರಣೆ
3. ಅಕ್ಷರಜ್ಞಾನ
4. ಕಾರ್ಯನಿರ್ವಹಣೆ ಮತ್ತು ಕಾರ್ಯ ನೆರವೇರಿದ ನಂತರ ಅದರ ಬಗ್ಗೆ ವಿವೇಚನೆ.

ಅರಿವಿನ ಜಾಗೃತಿಯೊಂದಿಗೆ ಕೈಗೊಳ್ಳುವ ಸಾಕ್ಷರತೆಯ ಮುಖ್ಯ ಹಂತಗಳು : ಸೂತ್ರೀಕರಣ ಮತ್ತು ಸೂತ್ರ ವಿವರಣೆ. ಅಕ್ಷರಜ್ಞಾನ ಮತ್ತು ಕಾರ್ಯನಿರ್ವಹಣೆಯ ನಂತರ ಅದರ ಬಗ್ಗೆ ವಿವೇಚನೆ, ಸೂತ್ರ ವಿವರಣೆಯಲ್ಲಿಯೇ ಸಮಾವೇಶಗೊಳ್ಳುತ್ತದೆ. ಆದರೆ ಅವು ವಿಶಿಷ್ಟವಾಗಿದ್ದು ಪೂರ್ಣವಾಗಿರುವ ಘಟಕಗಳೆಂದು ಅನಿಸುವುದರಿಂದ ಅವನ್ನು ಬೇರೆ ಬೇರೆ ಹಂತಗಳೆಂದು ಪರಿಗಣಿಸಲಾಗಿದೆ.

ಅಕ್ಷರಜ್ಞಾನ ಅರಿವಿನ ಜಾಗೃತಿಯ ಅತ್ಯಗತ್ಯ ಅಂಗವಲ್ಲ. ಆದರೆ ಈಗಿನ ಸಮಾಜದಲ್ಲಿ ಅಕ್ಷರಜ್ಞಾನ ಅತ್ಯವಶ್ಯಕ. ಆದ್ದರಿಂದ ಅರಿವಿನ ಜಾಗೃತಿ ತರುವಲ್ಲಿ ಅಕ್ಷರಜ್ಞಾನವೂ ಒಂದು ಪ್ರಮುಖ ಸಾಧನ ಎಂಬ ಅರಿವಾಗಿ, ಅನಕ್ಷರಸ್ಥ ವಯಸ್ಕರು ಅಕ್ಷರಜ್ಞಾನವನ್ನು ಪಡೆಯುವಲ್ಲಿ ತೊಡಗುವರು. ಆದ್ದರಿಂದ ಅಕ್ಷರಜ್ಞಾನ ಎಂಬ ಒಂದು ಅಂಶವನ್ನು ಬಿಟ್ಟರೆ ಉಳಿದ ಹಂತಗಳನ್ನು ಯಾವುದೇ ಜನಸಮುದಾಯವನ್ನು ಅರಿವಿನ ಜಾಗೃತಿಯ ಹಾದಿಗೆ ತರುವಂತೆ ಪ್ರೇರಕನು ಬಳಸಬಹುದು.

## 1. ಸೂತ್ರೀಕರಣ ಮತ್ತು ಸೂತ್ರಮಾಲೆಯ ರಚನೆ

### 1.1 ಸೂತ್ರೀಕರಣ

1.1.1 ಅರಿವಿನ ಜಾಗೃತಿ ನಡೆಯಬೇಕಾದ ಸ್ಥಳಗಳಲ್ಲಿ ಪ್ರೇಕ್ಷಕರು ತಿರುಗಾಡಿ, ಅಲ್ಲಿಯ ಜನರ ಸಂಪೂರ್ಣ ಪರಿಸ್ಥಿತಿಯನ್ನು ಅರ್ಥ ಮಾಡಿಕೊಳ್ಳಲು ಪ್ರಯತ್ನಿಸ

ಬೇಕು. ಜನರ ಜೀವನಕ್ರಮದ ಅರಿವನ್ನು ಬೇರೆ ಬೇರೆ ರೀತಿಯಲ್ಲಿ ಪಡೆಯ ಬಹುದು. ತಮ್ಮ ಸ್ವಂತ ವೀಕ್ಷಣೆಯೊಂದಿಗೆ ಜನರ ಮೂಲಕವೂ ಅವರ ಬಗ್ಗೆ ಮಾಹಿತಿ ಪಡೆಯುವಂತೆ ಪ್ರಯತ್ನ ಮಾಡಬೇಕು. ಜನರಿಂದ ಅವರ ವಿಷಯ ತಿಳಿದುಕೊಳ್ಳುವಾಗ ಮುಖ್ಯವಾಗಿ ಗಮನದಲ್ಲಿಡಬೇಕಾದ ವಿಷಯವೇನೆಂದರೆ : ಯಾವುದೇ ವಿಷಯದ ಬಗ್ಗೆ ಜನರಿಂದ ತಿಳಿಯಬೇಕೆಂದಿರುವಾಗ ಅದರ ಬಗ್ಗೆ ನೇರವಾಗಿ ಒಂದೇ ಸಮನೆ ಪ್ರಶ್ನೆಗಳ ಮಳೆ ಸುರಿಸುವ ಬದಲು, ಜನರೊಡನೆ ಆತ್ಮೀಯತೆಯಿಂದ ವರ್ತಿಸಿ, ಅವರ ಒಲವನ್ನು ಮೊದಲು ಸಂಪಾದಿಸಬೇಕು. ಹರಟೆ ಹೊಡೆಯುವವನಂತೆ ಸುಖದುಃಖಗಳ ಮಾತುಗಳನ್ನು ಆಡುತ್ತಾ, ಸಂದರ್ಭ ಒದಗಿ ದಂತೆ ಅವರ ಜೀವನದ ಬಗ್ಗೆಯೂ ಅವರ ಕೆಲಸದ ಬಗ್ಗೆಯೂ ಮಾಹಿತಿ ಪಡೆಯ ಬೇಕು. ಆದಷ್ಟು ಮಟ್ಟಿಗೆ ಈ ವಿಷಯಗಳನ್ನು ಸಂಭಾಷಣೆ ಮುಕ್ತಾಯವಾದ ಮೇಲೆಯೋ, ಏಕಾಂತದಲ್ಲಿ ಪುಸ್ತಕದಲ್ಲಿ ಬರೆದಿಡಬೇಕು. ಜನರ ಒಲವನ್ನು ಸಂಪೂರ್ಣವಾಗಿ ಗಳಿಸಿದ್ದರೆ, ಅವರು ಮಾತಾಡುತ್ತಿದ್ದಾಗಲೇ ಗಮನಕ್ಕೆ ಬಂದ ಹೊಸ ಅಥವಾ ವಿಶಿಷ್ಟ ಸಂಗತಿಗಳನ್ನು ಪುಸ್ತಕದಲ್ಲಿ ಬರೆಯಬಹುದು. ಹೀಗೆ ಸಂಭಾಷಣೆಯಲ್ಲಿ ತೊಡಗಿರುವಾಗ ಮುಖ್ಯವಾಗಿ ಜನರ ಭಾಷೆ, ಅವರು ಉಪ ಯೋಗಿಸುವ ವಿಶಿಷ್ಟ ಪದಗಳು, ಬಳಸುವ ನುಡಿಗಟ್ಟುಗಳು, ಗಾದೆಗಳು, ಅವರ ಮಾತಿನಲ್ಲಿ ಕಂಡುಬರುವ ಅವರ ಜೀವನಕ್ರಮ, ಜೀವನ ಮೌಲ್ಯಗಳು, ರೀತಿ ಪದ್ಧತಿ ಗಳು, ಕೆಲಸದ ವಿಧಾನಗಳು–ಇವೆಲ್ಲವನ್ನೂ ಗುರುತಿಸಿ ಸಂದರ್ಭೋಚಿತವಾಗಿ ಬರೆದಿಡ ಬೇಕು. ಹೀಗೆ ಬೇರೆ ಬೇರೆ ವೇಳೆಗಳಲ್ಲೂ ಪ್ರಸಂಗಗಳಲ್ಲೂ ಭೇಟಿ ಮಾಡಿ, ಅವರ ಜೀವನದ ನಿಜಪರಿಸ್ಥಿತಿಯ ಸಮಗ್ರ ಪರಿಚಯವನ್ನು ಪಡೆಯುವಂತೆ ಪ್ರಯತ್ನಿಸ ಬೇಕು. ಈ ರೀತಿ ಜನರ ಜೀವನಕ್ರಮ, ಅವರ ಕೆಲಸಗಳು, ಅವರ ಸಮಸ್ಯೆಗಳು, ಅವರಾಡುವ ಭಾಷೆ, ಅವರ ಮೌಲ್ಯಗಳು, ಅವರ ರೀತಿ ಪದ್ಧತಿಗಳು ಇವೆಲ್ಲವುಗಳ ಬಗ್ಗೆ ಒಳಗಿನ ಜ್ಞಾನ ಪಡೆಯಬೇಕು.

1.1.2 ಒಂದೇ ಪ್ರದೇಶದ ಬೇರೆ ಬೇರೆ ಊರುಗಳಲ್ಲಿ ಪ್ರೇರಕರು ತಿರುಗಾಡಿ, ಜನರ ನಿಜಪರಿಸ್ಥಿತಿಯ ಪರಿಚಯ ಪಡೆದ ಮೇಲೆ, ಎಲ್ಲರೂ ಒಂದು ಕಡೆ ಸೇರಿ, ಎಲ್ಲರಿಗೂ ಗೋಚರವಾಗಿದ್ದ ವಿಷಯಗಳನ್ನು ಸಂಗ್ರಹಿಸಬೇಕು.

1.1.3 ಗೋಚರವಾಗಿದ್ದ ವಿಷಯಗಳನ್ನು ಒಟ್ಟುಗೂಡಿಸಿದ ಮೇಲೆ, ಅವುಗಳ ಮೇಲೆ ಚರ್ಚೆ ನಡೆಸಿ, ಅವುಗಳಲ್ಲಿ ಮುಖ್ಯವಿಷಯಗಳನ್ನು ಆರಿಸಬೇಕು. ಆ ಸಂಗತಿ ಗಳು ಜನರ ಜೀವನದ ಕೆಲವು ಉದಾತ್ತ ಮೌಲ್ಯಗಳನ್ನೂ ಮುಖ್ಯ ಸಮಸ್ಯೆಗಳನ್ನೂ ಸಮಾಜದ ಹಲಕೆಲವು ಅಂತರ್ವಿರೋಧಗಳನ್ನೂ ಒಳಗೊಂಡಿರುವಂತಿದ್ದು, ಜನರ ಸಮಗ್ರ ಚಿತ್ರವನ್ನು ಕೊಡುವಂತಿರಬೇಕು.

1.1.4 ಆ ಪ್ರತ್ಯೇಕ ವಿಷಯಗಳಿಗೆ ಯೋಗ್ಯವಾದ ಶಬ್ದಗಳನ್ನು ಆರಿಸಬೇಕು. ಆದಷ್ಟು ಮಟ್ಟಿಗೆ ಜನರು ಬಳಸುವ ಪದಗಳನ್ನೇ ಆರಿಸಬೇಕು. ಒಂದು ಸಂಗತಿಯನ್ನು ನಿರೂಪಿಸಲು ಹಲವಾರು ಶಬ್ದಗಳು ಬಳಕೆಯಲ್ಲಿದ್ದರೆ, ಅವೆಲ್ಲವನ್ನು ಗುರುತಿಸಿಟ್ಟು, ನಂತರ ಸೂತ್ರಮಾಲೆಯನ್ನು ರಚಿಸುವಾಗ ಯೋಗ್ಯವಾದ ಪದವನ್ನೇ ಆರಿಸಬಹುದು.

1 1 5 ಪ್ರತಿ ವಿಷಯವನ್ನು ವಿವರವಾಗಿ ಸಮಾಲೋಚಿಸಿ, ಆ ವಿಷಯದ ಎಲ್ಲಾ ಮುಖಗಳ ಸ್ಪಷ್ಟಜ್ಞಾನ ಪಡೆಯಬೇಕು. ಈ ಹಂತದಲ್ಲಿ ಇಂತಹ ವಿಷಯಗಳ ಬಗ್ಗೆ ಹೆಚ್ಚು ಜಿಜ್ಞಾಸೆ ಮಾಡಿದವರ ಸಹಾಯ ಪಡೆಯುವುದು ಉತ್ತಮ. ಪ್ರತಿ ಹಳ್ಳಿಗೂ ತನ್ನದೇ ಆದ ಸ್ವರೂಪ ಇದ್ದರೂ, ಒಂದು ಪ್ರದೇಶಕ್ಕೆ ಸೀಮಿತವಾದ ಹಳ್ಳಿಗಳಲ್ಲಿ ಕೆಲವು ವಿಷಯಗಳು ಸಾಮಾನ್ಯವಾಗಿರುತ್ತವೆ. ಒಂದು ಜಿಲ್ಲೆ ಅಥವಾ ರಾಜ್ಯಕ್ಕೆ ಸಂಬಂಧಪಟ್ಟ ವಿಷಯಗಳೂ ಇರುತ್ತವೆ. ಅದೇ ರೀತಿ ಇಡೀ ಭಾರತದೇಶ ಹಾಗೂ ಭಾರತ ಮತ್ತು ಇತರ ದೇಶಗಳಿಗೂ ಅನ್ವಯಿಸುವಂತಹ ವಿಷಯಗಳಿರುತ್ತವೆ. ಆದ್ದರಿಂದ ಆ ವಿಷಯಗಳ ಮೇಲೆ ಆಳವಾದ ಅಧ್ಯಯನ ಮಾಡಿದವರ ನೆರವು ಪಡೆದರೆ ನಮ್ಮ ಅರಿವು ವಸ್ತುನಿಷ್ಠವಾಗಿರುವುದರಲ್ಲಿ ಸಂಶಯವಿಲ್ಲ.

1.1.6 ಆರಿಸಿದ ಪ್ರತಿ ವಿಷಯದ ಬಗ್ಗೆ ಇನ್ನೂ ಸ್ಪಷ್ಟಜ್ಞಾನ ಬರಲು, ಆ ವಿಷಯಗಳ ಬಗ್ಗೆ ಪ್ರೇರಕರ ಹಾಗೂ ಜನರ ಏನಾದರೂ ವಿಶಿಷ್ಟ ಅನುಭವಗಳಿದ್ದರೆ ಅಂತಹ ಸಂಗತಿಗಳನ್ನೂ ಘಟನೆಗಳನ್ನೂ ಸಂಗ್ರಹಿಸಬಹುದು.

1.1.7 ಹೀಗೆ ಪ್ರತಿ ವಿಷಯದ ಮೇಲೆ ಸ್ಪಷ್ಟಜ್ಞಾನ ಮೂಡಿದ ಮೇಲೆ, ಪ್ರತಿ ವಿಷಯವನ್ನು ನಿರೂಪಿಸುವ ಒಂದು ಸಾಧನದ ರಚನೆಯಾಗಬೇಕು. ಒಂದು ವಿಷಯವನ್ನು ನಿರೂಪಿಸುವ ಸಾಧನಕ್ಕೆ ಸೂತ್ರವೆಂದು ಕರೆದರೆ, ಸೂತ್ರ ನಿರ್ಮಿಸುವ ಕಾರ್ಯವೇ ಸೂತ್ರೀಕರಣವೆನಿಸುವುದು. ಸೂತ್ರವು ದೃಶ್ಯರೂಪದ್ದು ಅಥವಾ ಶ್ರವ್ಯರೂಪದ್ದು ಆಗಿರಬಹುದು. ಅವುಗಳಲ್ಲಿಯೂ ಹಲವಾರು ವಿಧಗಳಿರಬಹುದು. ದೃಶ್ಯಸೂತ್ರವು ವಿಷಯವನ್ನು ಅಥವಾ ಸಮಸ್ಯೆಯನ್ನು ಎತ್ತಿತೋರಿಸುವ ಚಿತ್ರವಿರಬಹುದು. ಅದು ಸುಲಭ ರೀತಿಯ ರೇಖಾಚಿತ್ರವಾಗಿರಬಹುದು ಅಥವಾ ವರ್ಣಚಿತ್ರವಾಗಿರಬಹುದು. ಸ್ಥಿರಚಿತ್ರ ಹಾಗೂ ಕಿರು ಚಲನಚಿತ್ರಗಳನ್ನೂ ಬಳಸಬಹುದು. ಪುಸ್ತಕದಲ್ಲಿ, ಪತ್ರಿಕೆಗಳಲ್ಲಿ ಅಂತಹ ವಿಷಯವನ್ನು ತೋರಿಸುವ ಚಿತ್ರವಿದ್ದರೆ, ಅವನ್ನೇ ಉಪಯೋಗಿಸಬಹುದು. ಬೀದಿ ನಾಟಕದ ಮೂಲಕವೂ ಒಂದು ಸನ್ನಿವೇಶವನ್ನು ತೋರಿಸಬಹುದು. ಶ್ರವ್ಯ ಮಾಧ್ಯಮದಲ್ಲಿ ಒಂದು ಸೂಕ್ತ ಕಥೆಯೋ ಅಥವಾ ಒಂದು ಹಾಡೋ ಸೂತ್ರವಾಗಬಹುದು. ವಾರ್ತಾ

ಪತ್ರಿಕೆಗಳಲ್ಲಿ ಬಂದ ಸಂಗತಿಗಳ ಪಠಣ ಅಥವಾ ಬೇರೆ ಪ್ರಬಂಧಗಳ ಓದುವಿಕೆ ಕೂಡ ಸೂತ್ರವೆನಿಸಬಹುದು. ದೃಶ್ಯ ಮತ್ತು ಶ್ರವ್ಯ ಮಾಧ್ಯಮಗಳನ್ನು ಕೂಡಿಸಿ ಕಿರು ನಾಟಕದಲ್ಲಿ ಸಮಸ್ಯೆಯನ್ನು ತೋರಿಸುವ ಸನ್ನಿವೇಶವೊಂದನ್ನು ಸಂಭಾಷಣೆಯ ಹಾಗೂ ನಟನೆಯ ಮೂಲಕ ಸ್ಪಷ್ಟಪಡಿಸಬಹುದು.

ಚಿತ್ರರೂಪದ ಸೂತ್ರದಲ್ಲಿ ಆ ವಿಷಯವನ್ನು ನಿರೂಪಿಸುವ ಶಬ್ದ (ಜನಕ ಶಬ್ದ) ಒಂದು ಕಡೆ ನಮೂದಿಸಿರಬೇಕು. ಶ್ರವ್ಯರೂಪದ ಸೂತ್ರದಲ್ಲಿಯೂ ಸಂಬಂಧಪಟ್ಟ ಪದದ ಬಳಕೆಯಾಗಬೇಕು.

## 1.2 ಸೂತ್ರಮಾಲೆ

ಹೀಗೆ ತಯಾರಾದ ಸೂತ್ರಗಳನ್ನು ಒಂದು ಕ್ರಮದಲ್ಲಿ ಅಳವಡಿಸಿದರೆ **ಸೂತ್ರಮಾಲೆ** ಎನಿಸುವುದು. ಬೇರೆ ಬೇರೆ ಸೂತ್ರಗಳನ್ನು ಯಾವ ಕ್ರಮದಲ್ಲಿ ಅಳವಡಿಸಬೇಕು ಎಂಬುದರಲ್ಲಿ ಕೆಲವು ನಿಯಮಗಳನ್ನು ಪಾಲಿಸಬೇಕಾಗಬಹುದು. ಆ ನಿಯಮಗಳು ಆಯಾ ಭಾಷೆಯ ಔಚಿತ್ಯಗಳನ್ನು ಮನಸ್ಸಿನಲ್ಲಿಟ್ಟುಕೊಂಡು ರೂಪಿಸಿದಂತಹವಾಗಿವೆ.

1.2.1 ಕನ್ನಡದ ಬಗ್ಗೆ ಹೇಳುವುದಾದರೆ ಸಮಸ್ಯೆಯನ್ನು ಸೂಚಿಸುವ ಸೂತ್ರ ಮಾಲೆಯ ಶಬ್ದಗಳಲ್ಲಿ ಅವರ್ಗೀಯ ವ್ಯಂಜನಗಳು, ಅಲ್ಪಪ್ರಾಣಗಳು, ಕೆಲವು ಮಹಾಪ್ರಾಣಗಳು, ಒತ್ತಕ್ಷರಗಳು ಮತ್ತು ರಕಾರದ ಅರ್ಕಚಿಹ್ನೆಯೂ ಬರು ವಂತಿರಬೇಕು. ಸ್ವರಗಳನ್ನು ಮತ್ತು ಉಳಿದ ಮಹಾಪ್ರಾಣಗಳನ್ನು ಹಾಗೂ ಒತ್ತಕ್ಷರಗಳನ್ನು ಅನಕ್ಷರಸ್ಥ ವಯಸ್ಕರಿಂದಲೇ ಪ್ರಶ್ನೆಗಳ ಮೂಲಕ ಪ್ರಕಟಿಸಲು ಪ್ರಯತ್ನಿಸಲಾಗುವುದು.

1.2:2 ಮೊದಲ ಸೂತ್ರದಲ್ಲಿ ಬರುವ ಶಬ್ದ ಚಿಕ್ಕದಾಗಿದ್ದು — ಹೆಚ್ಚೆಂದರೆ ಮೂರು ಅಕ್ಷರಗಳಿಂದ ಕೂಡಿದ್ದು—ಅದರಲ್ಲಿಯ ಅಕ್ಷರಗಳು ಅಕಾರಾಂತ ವ್ಯಂಜನ ಗಳಾಗಿರಬೇಕು. ಸಾಧ್ಯವಾದಷ್ಟು ಮಟ್ಟಿಗೆ ಅಲ್ಪಪ್ರಾಣಗಳು ಇಲ್ಲವೇ ಅವರ್ಗೀಯ ವ್ಯಂಜನಗಳು ಬಂದರೆ ಉತ್ತಮ. ನಂತರದ ಸೂತ್ರಗಳಲ್ಲಿಯ ಶಬ್ದಗಳಲ್ಲಿ ಮಹಾ ಪ್ರಾಣಗಳೂ ಬೇರೆ ಸ್ವರಾಂತ ಅಕ್ಷರಗಳೂ ಬರಬಹುದು.

1.2.3 ಇಂತಹ ಒಂಬತ್ತು - ಹತ್ತು ಶಬ್ದಗಳು ಬಂದ ಮೇಲೆಯೇ ಒತ್ತಕ್ಷರದ ವಿವೇಚನೆ ಬರಬೇಕು. ಮೊದಲು ಹೆಚ್ಚು ಬದಲಾವಣೆಯಾಗದ ಒತ್ತಕ್ಷರದ ಪರಿಚಯವಾಗಬೇಕು. ಆದ್ದರಿಂದ ೯ನೇ ಅಥವಾ ೧೦ನೇ ಸೂತ್ರದಲ್ಲಿ

ಅಂತಹ ಒತ್ತಕ್ಷರವಿರುವ ಶಬ್ದ ಬರಬೇಕು. ಆ ಸೂತ್ರದ ವಿವೇಚನೆ ಆಗುವ ಮೊದಲು, ಇಷ್ಟರವರೆಗೆ ವಿವೇಚಿಸಿದ ಸೂತ್ರವೊಂದರಲ್ಲಿ ಆ ಒತ್ತಕ್ಷರದ ಮೂಲಾಕ್ಷರ ಬರುವುದು ಉಚಿತ.

1.2.4 ನಂತರದ ಒಂದು ಜನಕಶಬ್ದದಲ್ಲಿ ಮೂಲಾಕ್ಷರದಿಂದ ಹೆಚ್ಚು ಮಾರ್ಪಾಡಾಗುವ ಒತ್ತಕ್ಷರ ಬರಬೇಕು. ಇದರ ಮೂಲಾಕ್ಷರವೂ ಮೊದಲಿನ ಸೂತ್ರವೊಂದರಲ್ಲಿ ಬರಬೇಕು. ಆ ಒಂದು ಒತ್ತಕ್ಷರದ ಉದಾಹರಣೆಯಿಂದ ಉಳಿದ ಇದೇ ಮಾದರಿಯ ಒತ್ತಕ್ಷರಗಳನ್ನು ಕಂಡುಹಿಡಿಯಬಹುದು. ಆದ್ದರಿಂದ ಆ ಸೂತ್ರದ ಮೊದಲೇ ಆ ಎಲ್ಲಾ ಒತ್ತಕ್ಷರಗಳ ಮೂಲಾಕ್ಷರಗಳು ಬಂದು ಅವುಗಳ ಪರಿಚಯವಾಗಿದ್ದರೆ ಬಹಳ ಉತ್ತಮ. ಮೂಲಾಕ್ಷರದಿಂದ ಬದಲಾವಣೆಯಾಗದ ಒತ್ತಕ್ಷರಗಳ ವಿಚಾರವನ್ನು ಇನ್ನೊಂದು ಉದಾಹರಣೆಯಿಂದ ಮುಂದೆ ಕಂಡುಹಿಡಿಯ ಬಹುದು. ಹೀಗೆ ಒತ್ತಕ್ಷರಗಳ ಕಲ್ಪನೆ ಸ್ಪಷ್ಟ ಆದ ಮೇಲೆ ಇಷ್ಟರವರೆಗೆ ಕಲಿತ ಎಲ್ಲಾ ವ್ಯಂಜನಗಳ ಒತ್ತಕ್ಷರಗಳನ್ನು ವಯಸ್ಕರಿಂದಲೇ ರೂಪಿಸಿಕೊಳ್ಳಬಹುದು– ಮತ್ತು ಮುಂದೆ ಹೋಗುತ್ತಿದ್ದಂತೆ ಹೊಸದಾಗಿ ಕಲಿತ ವ್ಯಂಜನಗಳ ಒತ್ತಕ್ಷರಗಳನ್ನು ಗುರುತಿಸಬಹುದು.

1.2.5 ಇದೇ ಕ್ರಮವನ್ನನುಸರಿಸಿ ಅಲ್ಪಪ್ರಾಣದಿಂದ ಮಹಾಪ್ರಾಣಗಳನ್ನು ರೂಪಿಸಿಕೊಳ್ಳಬಹುದು. ಮೊದಲು ಅಲ್ಪಪ್ರಾಣದಿಂದ ಕೇವಲ ಬಾಲವನ್ನು ಕೂಡಿಸಿ ಆಗುವ ಮಹಾಪ್ರಾಣಗಳನ್ನು ಎರಡು ಸೂತ್ರಗಳಲ್ಲಿ ಬರುವ ಶಬ್ದಗಳಲ್ಲಿಯ ಅಲ್ಪಪ್ರಾಣ ಮತ್ತು ಮಹಾಪ್ರಾಣದ ಹೋಲಿಕೆಯಿಂದ ತಿಳಿದುಕೊಳ್ಳಬಹುದು. ಅಲ್ಪಪ್ರಾಣಕ್ಕಿಂತ ವಿಶಿಷ್ಟವಾದ ರೂಪವುಳ್ಳ ಮಹಾಪ್ರಾಣಗಳನ್ನೂ ಇದೇ ಉದಾಹರಣೆಯಿಂದ ತಿಳಿದುಕೊಳ್ಳಬಹುದು.

1.2.6 ಸೂತ್ರಮಾಲೆಯ ಕೊನೆಗೆ ರಕಾರದ ಅರ್ಕಚಿಹ್ನೆಯ ವಿವೇಚನೆ ನಡೆಯಬಹುದು. ಇದರ ಜ್ಞಾನವನ್ನು ಪ್ರಶ್ನೆಗಳ ಮುಖಾಂತರ ಹೊರಗೆ ತರಲು ಅರ್ಕಚಿಹ್ನೆಯಿಂದ ಕೂಡಿರುವ ಶಬ್ದವನ್ನು ಅದರ ಎರಡು ರೂಪದಲ್ಲಿ ಬರೆದು ತೋರಿಸಿ, ಅವುಗಳ ಹೋಲಿಕೆಯಿಂದ ಅರ್ಕಚಿಹ್ನೆಯ ಜ್ಞಾನವನ್ನು ಶಿಕ್ಷಾರ್ಥಿಯಿಂದಲೇ ಪಡೆಯಬಹುದು. ಮೊದಲರೂಪದಲ್ಲಿ 'ರ' ಅಕ್ಷರವನ್ನೇ ಮೂಲಾಕ್ಷರವನ್ನಾಗಿ ಬಳಸಿರಬೇಕು ಮತ್ತು ಅದರ ಜೊತೆಗೆ ಬರುವ ಅಕ್ಷರವು ಒತ್ತಕ್ಷರವಾಗಿರಬೇಕು. ಎರಡನೇ ರೂಪದಲ್ಲಿ, ಮೊದಲ ರೂಪದಲ್ಲಿ ಒತ್ತಕ್ಷರವಾಗಿ ಬಂದ ಅಕ್ಷರ ಮೂಲಾಕ್ಷರವಾಗಿ ಬಂದು ರ ಅಕ್ಷರವು ಅರ್ಕಚಿಹ್ನೆಯಲ್ಲಿ ಬರಬೇಕು.

## 2. ಸೂತ್ರವಿವರಣೆ

2.0 ಸೂತ್ರೀಕರಣ ಮತ್ತು ಸೂತ್ರಮಾಲೆಯ ರಚನೆಯಾದ ಮೇಲೆ ಪ್ರೇರಕನು ತನ್ನ ಹಳ್ಳಿಯ ವಯಸ್ಕರ ಕೂಟ ಕಟ್ಟಿ ಕ್ರಮಪ್ರಕಾರವಾಗಿ ಒಂದೊಂದೇ ಸೂತ್ರದ ಮೂಲಕ ಸಂವಾದ ನಡೆಸುವ ವಿಧಾನಕ್ಕೆ **ಸೂತ್ರವಿವರಣೆ** ಎಂದು ಕರೆಯಬಹುದು.

ಸೂತ್ರವಿವರಣೆಯಲ್ಲೂ ಗಮನಿಸಬೇಕಾದ ಕೆಲವು ಹಂತಗಳಿವೆ. ಕಲಿಯುವವರು ಸಂವಾದದ ಮೂಲಕ ಸೂತ್ರೀಕರಿಸಿದ ವಸ್ತುವನ್ನು ವಿಶ್ಲೇಷಿಸಿ, ವಿಭಜಿಸಲಿಕ್ಕೆ ತೊಡಗುವರು. ಈ ಕಾರ್ಯದಿಂದ ವಸ್ತುವಿನ ಬೇರೆ ಬೇರೆ ಭಾಗಗಳಿಗಿರುವ ಸಂಬಂಧದ ಸ್ಪಷ್ಟ ಕಲ್ಪನೆಯಾಗಿ ಇಡೀ ವಸ್ತುವಿನ ನಿಜಸ್ವರೂಪವನ್ನು ಬೆಳಕಿಗೆ ತರುವರು. ಇಷ್ಟರವರೆಗೆ ಆ ನಿಜಸ್ವರೂಪವು ಅವರಿಂದ ಮರೆಯಾಗಿತ್ತು. ಕೆಳಗೆ ಬರುವ ವಿವೇಚನೆಯಲ್ಲಿ ಸೂತ್ರವನ್ನು ಚಿತ್ರವೆಂದೇ ಪರಿಗಣಿಸಲಾಗಿದೆ. ಚಿತ್ರದ ಬಗ್ಗೆ ಹೇಳಿದ ವಿಷಯಗಳನ್ನು ಬೇರೆ ಮಾಧ್ಯಮದ ಸೂತ್ರಗಳಿಗೂ ತಕ್ಕಂತೆ ಅಳವಡಿಸಬಹುದು.

2.1.1 ಪ್ರೇರಕನು ವಯಸ್ಕರಿಗೆ ಸೂತ್ರದ ಚಿತ್ರವನ್ನು ತೋರಿಸಿ ಅವರಿಂದ ಆ ಚಿತ್ರದ ವಿವರಣೆ ಪಡೆಯುವನು. ಚಿತ್ರದಲ್ಲಿ ಒಂದು ಸಮಸ್ಯೆ ಅಥವಾ ವಿಷಯವನ್ನು ಎತ್ತಿ ತೋರಿಸಲು ಬೇಕಾದ ಸಂಗತಿಗಳೇ ಇರುತ್ತವೆ. ಆದ್ದರಿಂದ ಆ ಚಿತ್ರದ ಪ್ರತಿಯೊಂದು ಸಂಗತಿಯನ್ನೂ ಗಮನಿಸಿ ಪ್ರೇರಕನು ಅದು ಯಾವುದನ್ನು ಸೂಚಿಸುತ್ತದೆ ಎಂಬುದನ್ನು ಶಿಕ್ಷಾರ್ಥಿಗಳು ಕಂಡುಹಿಡಿಯುವಂತೆ ಮಾಡಬೇಕು. ಚಿತ್ರದಲ್ಲಿ ಸೂತ್ರದ ಶಬ್ದವೂ ಇರುವುದು. ಅದನ್ನು ವಯಸ್ಕರು ಗಮನಿಸಿದರೆ ಅದು ಸೂತ್ರದ ಶಬ್ದರೂಪ ಎಂದು ಪ್ರೇರಕನು ಹೇಳಬಹುದು.

2.1.2 ಚಿತ್ರದ ಪೂರ್ಣವಿವರಣೆ ಪಡೆದ ಮೇಲೆ ಆ ಚಿತ್ರ ಯಾವ ವಿಷಯ ಅಥವಾ ಸಮಸ್ಯೆಯನ್ನು ಎತ್ತಿ ತೋರಿಸುತ್ತದೆ ಎಂಬುದನ್ನು ವಯಸ್ಕರು ಕಂಡುಹಿಡಿಯುವಂತೆ ಮಾಡಬೇಕು. ಅಷ್ಟೇ ಅಲ್ಲ, ಆ ಸಮಸ್ಯೆಯ ಬಗ್ಗೆ ವಸ್ತುನಿಷ್ಠವಾಗಿಯೂ ಚರ್ಚೆ ಮಾಡುವಂತೆ ಪ್ರೇರಕನು ನೋಡಿಕೊಳ್ಳಬೇಕು.

2.1.3 ಚಿತ್ರವು ಸೂಚಿಸುವ ಸಮಸ್ಯೆಯ ಬಗ್ಗೆ ವಸ್ತುನಿಷ್ಠ ಚರ್ಚೆ ಮಾತ್ರ ಸಾಲದು. ಅರಿವಿನ ಜಾಗೃತಿ ಆಗಬೇಕಾದರೆ ಇಷ್ಟರವರೆಗೆ ವಿಶ್ಲೇಷಿಸಿದ ಸಮಸ್ಯೆ ಅಥವಾ ವಿಷಯ ನಮ್ಮ ಊರಿನ ಸಮಸ್ಯೆಯನ್ನೇ ಬಿಂಬಿಸುತ್ತದೆ ಎಂಬ ಜ್ಞಾನ

ಕುರಿತ ವಯಸ್ಕರಲ್ಲಿ ಮೂಡಬೇಕು. ಇಲ್ಲಿ ವಯಸ್ಕರು ಆ ಸಮಸ್ಯೆ ಅಥವಾ ವಿಷಯದ ಬಗ್ಗೆ ತಮ್ಮ ಊರಿನ ನಿದರ್ಶನಗಳನ್ನು ಕೊಟ್ಟು ಚರ್ಚೆಯನ್ನು ಮುಂದುವರಿಸಬಹುದು.

2.2.1 ಸಮಸ್ಯೆಯ ವಸ್ತುನಿಷ್ಠ ವಿಚಾರವಾಗಿ ಆ ಸಮಸ್ಯೆ ತಮ್ಮದೇ ಎಂಬ ಅರಿವು ಮೂಡಿದ ಮೇಲೆ ಆ ಸಮಸ್ಯೆಯನ್ನು ಬಗೆಹರಿಸಲು ಏನು ಮಾಡಬೇಕು ಎಂಬುದರ ಬಗ್ಗೆ ವಯಸ್ಕರು ಆಲೋಚಿಸುವರು. ಸಂವಾದದ ಮೂಲಕ ಬೇರೆ ಬೇರೆ ಪರಿಹಾರ ಮಾರ್ಗಗಳನ್ನು ವಿಶ್ಲೇಷಿಸಿ ಸಮಸ್ಯೆಗೆ ಸೂಕ್ತ ಪರಿಹಾರವನ್ನು ಕಂಡುಹಿಡಿಯಬೇಕು.

2.2.2 ಸಮಸ್ಯೆಯ ಪರಿಹಾರದ ಬಗ್ಗೆ ಸಮಾಲೋಚನೆ ನಡೆದ ಮೇಲೆ ಪರಿಹಾರಮಾರ್ಗವನ್ನು ಕಾರ್ಯರೂಪಕ್ಕೆ ತರುವ ಯೋಜನೆಯನ್ನು ಹಾಕಬೇಕಾಗುವುದು. ಈ ಸಂದರ್ಭದಲ್ಲಿ ಪರಿಹಾರಮಾರ್ಗದಲ್ಲಿರುವ ಬೇರೆ ಬೇರೆ ಅಡೆತಡೆಗಳು, ಅದನ್ನು ಕಾರ್ಯರೂಪಕ್ಕೆ ತರಲು ಮಾಡಬೇಕಾದ ವಿವಿಧ ಕೆಲಸಗಳು, ಆ ಕೆಲಸಗಳನ್ನು ನಿರ್ವಹಿಸಲು ಬೇಕಾದ ಸೂಕ್ತ ಸಮಯ ಹಾಗೂ ಅವುಗಳ ನಿರ್ವಹಣೆಗೆ ಬೇಕಾದ ಅವಶ್ಯಕತೆಗಳು ಇವೆಲ್ಲವುಗಳ ಬಗ್ಗೆ ಚರ್ಚೆ ನಡೆಯುವುದು.

2.2.3 ಪರಿಹಾರಮಾರ್ಗವನ್ನು ಕಾರ್ಯರೂಪಕ್ಕೆ ತರುವಲ್ಲಿಯ ಪ್ರತಿಯೊಂದು ವಿಷಯವನ್ನು ವಿಶ್ಲೇಷಿಸಿದ ನಂತರ, ಬೇರೆ ಬೇರೆ ಕೆಲಸಗಳನ್ನು ನಿರ್ವಹಿಸಲು ವಯಸ್ಕರು ಜವಾಬ್ದಾರಿ ವಹಿಸುವರು ಮತ್ತು ಕೆಲಸ ಪೂರೈಕೆಗೆ ನಿರ್ದಿಷ್ಟ ಕಾಲಮಿತಿಯನ್ನೂ ಸೂಚಿಸುವರು.

2.3 ಸಮಸ್ಯೆಯ ಪೂರ್ಣಜ್ಞಾನವನ್ನು ಹಾಗೂ ಅದನ್ನು ಪರಿಹರಿಸುವಲ್ಲಿ ಯೋಗ್ಯವಾದ ಮಾರ್ಗವನ್ನು ಕಂಡುಹಿಡಿದ ಮೇಲೆ, ಸಮಸ್ಯೆಯನ್ನು ಸೂಚಿಸುವ ಪದವನ್ನು ವಯಸ್ಕರು ಸಂವಾದ, ಚರ್ಚೆಯ ಮೂಲಕವೇ ಓದಲೂ ಬರೆಯಲೂ ಕಲಿಯುವರು. ಈ ಘಟ್ಟದಲ್ಲಿ ಬರುವ ವಿವಿಧ ವಿಷಯಗಳನ್ನು 'ಅರಿವಿನ ಜಾಗೃತಿ'ಯ ಮೂರನೇ ಹಂತವಾದ 'ಅಕ್ಷರಜ್ಞಾನ'ದಲ್ಲಿ ವಿವರಿಸಲಾಗುವುದು.

2.4 ಪರಿಹಾರವನ್ನು ಕಂಡುಹಿಡಿದು ಅದನ್ನು ನಿರ್ವಹಿಸಲು ವಯಸ್ಕರು ಜವಾಬ್ದಾರಿಗಳನ್ನು ಹಂಚಿಕೊಂಡ ಮೇಲೆ ಕೆಲಸಗಳನ್ನು ನಿರ್ವಹಿಸಬೇಕಾಗುವುದು. ನಿಶ್ಚಿತ ಕಾಲಕ್ಕೆ ಆ ಕೆಲಸಗಳ ನಿರ್ವಹಣೆಯ ಬಗ್ಗೆ ವಿವೇಚನೆ ನಡೆಸಿ ಕಾರ್ಯವನ್ನು ಮುಂದುವರಿಸಬೇಕಾಗುವುದು. ಇದೇ ಅರಿವಿನ ಜಾಗೃತಿಯ ಕೊನೆಯ ಹಂತ,

ಕಾರ್ಯ ನಿರ್ವಹಣೆಯಲ್ಲಿ ಹೊಸ ಸಮಸ್ಯೆಗಳು ತಲೆದೋರಬಹುದು. ಸಂವಾದದ ಮೂಲಕ ಅವನ್ನು ಬಗೆಹರಿಸಲು ಬೇರೆ ಮಾರ್ಗಗಳನ್ನು ಕಂಡುಹಿಡಿಯಬೇಕಾಗಬಹುದು. ಅರಿವಿನ ಜಾಗೃತಿಯು ಹೀಗೆ ವಿಚಾರ–ಕೃತಿ, ಯೋಚನೆ–ಕೆಲಸಗಳ ಸಂಯೋಗದಿಂದಲೇ ರೂಪಿತಗೊಳ್ಳುವುದು ಮತ್ತು ಮುಂದುವರಿಯುವುದು.

## 3. ಅಕ್ಷರಜ್ಞಾನ

ಅಕ್ಷರಜ್ಞಾನದ ವಿವಿಧ ಹಂತಗಳನ್ನು ವಿವರಿಸಲು ತುಮಕೂರು ಜಿಲ್ಲೆಯ ಸಿರಾ ತಾಲೂಕಿನ ಆಮಲಗೊಂದಿಯ ಅಕ್ಕಪಕ್ಕದ ಊರುಗಳ ಪ್ರೇರಕರು 1985ರ ಸೆಪ್ಟೆಂಬರ್ 17 ರಿಂದ 24 ರವರೆಗೆ ಜರುಗಿದ ವಯಸ್ಕರ ಶಿಕ್ಷಣ ತರಬೇತಿ ಶಿಬಿರದಲ್ಲಿ ಆರಿಸಿದ ಸೂತ್ರಮಾಲೆಯನ್ನು ಉದಾಹರಣೆಗಾಗಿ ಬಳಸಲಾಗಿದೆ. ಅಲ್ಲಿ ಬರುವ ಬಹುತೇಕ ಸಮಸ್ಯೆಗಳು ಕರ್ನಾಟಕದ ಬೇರೆ ಜಿಲ್ಲೆಗಳಿಗೆ ಅನ್ವಯಿಸಬಹುದಾದರೂ ಕೆಲವೊಂದು ಕಡೆ ಆಯಾ ಪ್ರದೇಶದ ವೈಶಿಷ್ಟ್ಯವನ್ನರಿತು ಬದಲಾವಣೆ ಮಾಡಬೇಕಾಗ ಬಹುದು.

### 3.1 ಆಮಲಗೊಂದಿಯ ಸುತ್ತಮುತ್ತಲಿನ ಹಳ್ಳಿಗಳಿಗೆ ಅನ್ವಯಿಸುವಂತೆ ರಚಿಸಿದ ಸೂತ್ರಮಾಲೆ

ಜಗಳ, ಕಾಡು, ಕೂಲಿ, ಭೂಮಿ, ಜೀತ, ಸಾಲ, ಚಟ, ಮಹಿಳೆ / ಹೆಂಗಸು, ಆಹಾರ, ಹರಿಕಥೆ, ದೇವಸ್ಥಾನ, ಪ್ರಯಾಣ, ಮೂಢನಂಬಿಕೆ, ಜ್ಞಾನ, ಔಷಧಿ, ಶುಚಿತ್ವ, ಐಶ್ವರ್ಯ—ಐಶ್ವರ್ಯ.

ಕನ್ನಡದ ಅಕ್ಷರಗಳ ವೈಶಿಷ್ಟ್ಯಗಳನ್ನು ಕಲಿಯಲು ಇಷ್ಟು ಶಬ್ದಗಳು ಸಾಕಾದರೂ, ಆಮಲಗೊಂದಿಯ ಅಕ್ಕಪಕ್ಕದ ಊರುಗಳಿಗೆ ಸಂಬಂಧಪಟ್ಟ ಇನ್ನು ಕೆಲವು ಮುಖ್ಯ ಸಮಸ್ಯೆಗಳನ್ನು ಕೂಟದಲ್ಲಿ ಚರ್ಚಿಸಬಹುದು. ಅವು ಹೀಗಿವೆ :

ಮಳೆ, ಊರು (ಜಾತಿ), ಅತಿಥಿ-ಸತ್ಕಾರ, ವರದಕ್ಷಿಣೆ, ಪಾಠಶಾಲೆ, ಸರಕಾರ, ಕೆಲಸ, ಕೈಗಾರಿಕೆ (ಕಸುಬು), ಸಂಘ.

**3.1.1 ಜಗಳ :** ನಮ್ಮಲ್ಲಿ ಯಾವ ರೀತಿಯ ಜಗಳಗಳು ತಲೆದೋರುತ್ತವೆ ? ಜಗಳಕ್ಕೆ ಕಾರಣಗಳು ಯಾವುವು ? ಜಗಳದಿಂದಾಗುವ ಅನಿಷ್ಟಗಳೇನು ? ಪ್ರಚಲಿತ ನ್ಯಾಯವ್ಯವಸ್ಥೆಯಿಂದ ಬಡವರಿಗೆ ಸುಲಭವಾಗಿ ನ್ಯಾಯ ಸಿಗುತ್ತದೆಯೇ ? ಜಗಳವನ್ನು ತಪ್ಪಿಸ

ಬಹುದೇ ? ಏನು ಮಾಡಬೇಕು ? (ಕೂಟ ರಚನೆ ಮತ್ತು ಯೋಗ್ಯ ಮುಖಂಡರಿಂದ ನ್ಯಾಯ ದೊರಕಿಸಿಕೊಡುವಂತೆ ಮಾಡುವುದು).

3.1.2
ಕಾಡು :

ಮಳೆಯ ಅಭಾವಕ್ಕೆ ಕಾರಣ ಏನು ? ಕಾಡುಗಳು ಹೇಗೆ ನಾಶವಾದುವು ? "ರುಕ್ಷಾ ಕಡಿದು ಭಿಕ್ಷಾ ಬೇಡುವ ಪರಿಸ್ಥಿತಿ ಬಂದಿದೆ ನಮಗೆ".
ಸರಕಾರದ 'ಅರಣ್ಯ ನೀತಿ'. ಕಾಡು ಬೆಳೆಸಲು ಸರಕಾರದ ಯೋಜನೆಗಳು — ಅವನ್ನು ಪುರಸ್ಕರಿಸಲಿಕ್ಕೆ ನಾವೇನು ಮಾಡಬಹುದು ? ನಾವೇ ಹೆಚ್ಚು ಹೆಚ್ಚಾಗಿ ಮರಗಳನ್ನು ಬೆಳೆಸಬಹುದೋ ? ಪರಿಸರ ರಕ್ಷಣೆ.

3.1.3
ಕೂಲಿ :

ಕರ್ನಾಟಕದ ಕಾನೂನಿನ ಪ್ರಕಾರ ಕನಿಷ್ಠ ಕೂಲಿ — ಇದು ಸಿಗುತ್ತಿದೆಯೇ ? ಕೆಲಸದ ಪ್ರಾಧಾನ್ಯ — ಉತ್ಪನ್ನ ಕೆಲಸದಿಂದ; ಹೆಚ್ಚುವರಿ ಬೆಲೆ ಕೆಲಸದಿಂದ ; ಕೆಲಸವಿಲ್ಲದೇ ಉತ್ಪನ್ನವಿಲ್ಲ— ಆದರೆ ಪ್ರಚಲಿತ ಸ್ಥಿತಿ : ಬಂಡವಾಳ ಹಾಕಿದವರಿಗೆ, ಭೂಮಿ ಅಧಿಕ ಇದ್ದವರಿಗೆ ಉತ್ಪನ್ನದ ಸಿಂಹಪಾಲು. ಫಲದ (ಉತ್ಪನ್ನದ) ಯೋಗ್ಯವಾದ ಪಾಲು ಕೆಲಸದಾಳುಗಳಿಗೆ ಬರಲು ಏನು ಮಾಡಲು ಸಾಧ್ಯ ? — (ಕೆಲಸದಾಳುಗಳ ಸಂಘಟನೆ— ಮೊದಲು ಊರಿನವರ, ನಂತರ ಅಕ್ಕಪಕ್ಕದ ಊರುಗಳ ಕೆಲಸದಾಳುಗಳ ಸಂಘಟನೆ).

3.1.4
ಭೂಮಿ :

ಯಾರ್ಯಾರಿಗೆ ಎಷ್ಟೆಷ್ಟು ಭೂಮಿ ಇದೆ ?
ಭೂಮಿಯ ನಿಜವಾದ ಒಡೆತನ ಯಾರದು ? ದೇಶದ ಸಂಪನ್ಮೂಲಗಳ ಬಳಕೆ; ಭೂಸಂಧಾರಣೆಗಳ ಮುಖ್ಯ ನೀತಿ; ಕರ್ನಾಟಕದಲ್ಲಿ ಭೂಸಂಧಾರಣೆ ಜಾರಿಗೊಂಡಿರುವ ರೀತಿ. ನಮ್ಮ ಪ್ರದೇಶದಲ್ಲಿ ಆಗುವ ಅನ್ಯಾಯಗಳು — ಅವನ್ನು ಯಾವ ರೀತಿ ತಡೆಹಿಡಿಯಬಹುದು ?

3.1.5
ಜೀತ :

ಜೀತದಾಳುಗಳ ಕೆಲಸದ ಪರಿಸ್ಥಿತಿ.
ಹಿರಿಯರು ಮಕ್ಕಳನ್ನು ಏಕೆ ಜೀತಕ್ಕೆ ಕಳುಹಿಸುತ್ತಾರೆ ?

(ಹಣದ ಆವಶ್ಯಕತೆ) ಪರಿಹಾರವೇನು ? — (ಉಳಿತಾಯ ಮಾಡುವುದು).

3.1.6
ಸಾಲ :

ಸಾಲ ಮಾಡಬೇಕಾದ ಸಾಮಾನ್ಯ ಸಂದರ್ಭಗಳು — ಯಾವ ಕಾರಣಗಳಿಗೆ ಸಾಲದ ಮೊರೆ ಹೋಗುತ್ತಾರೆ ? ಸಾಲ ಮರು ಪಾವತಿ ಮಾಡಲಿರುವ ನಿಯಮಗಳು — ಬಡ್ಡಿಯ ದರ, ಅವಧಿ.

ಸಾಲ ಸಕಾಲದಲ್ಲಿ ಮರುಪಾವತಿ ಮಾಡದಿದ್ದರೆ ಆಗುವ ಅನಿಷ್ಟಗಳು ಯಾವುವು ? ಸಾಲ ತಪ್ಪಿಸಲು ಏನು ಮಾಡೋಣ ? — (ಕುಟುಂಬದ ಉಳಿತಾಯ ಪಾತ್ರ ಸಾಲದು. ಸಮುದಾಯ ಉಳಿತಾಯದ ಆವಶ್ಯಕತೆ, ಎಲ್ಲರ ನಿಧಿಯನ್ನು ಹೇಗೆ ಕೂಡಿಸೋಣ ?)

3.1.7
ಚಟ :

ಪ್ರಮುಖ ಚಟಗಳು — ಏಕೆ ಅವುಗಳ ಅಭ್ಯಾಸ ? – ಜೀವನದ ನೋವನ್ನು ಮರೆಮಾಡಲು ಪ್ರಯತ್ನ. ಜೀವನದಲ್ಲಿ ಸಾರ್ಥಕತೆ ಬರುವುದು ಹೇಗೆ ?

3.1.8
ಮಹಿಳೆ :

ಕುಟುಂಬದಲ್ಲಿ ಮಹಿಳೆಯ ಪಾತ್ರ; ಆದರೆ ಮಹಿಳೆಗೆ ಸಮಾಜ ಕೊಡುವ ಸ್ಥಾನ. ಮಹಿಳೆಯ ಕೊಡುಗೆಗೂ ಅವಳಿಗೆ ಸಿಗುವ ಪುರಸ್ಕಾರಕ್ಕೂ ಇರುವ ಅಂತರ — ಬೇರೆ ಬೇರೆ ನಿದರ್ಶನಗಳು : ಕೆಲಸದಲ್ಲಿ ಗಂಡಿಗಿಂತ ಅವಳಿಗೆ ಕಡಿಮೆ ಕೂಲಿ, ಸಮಾಜ ನಿರ್ವಹಿಸುವಲ್ಲಿ ಅವಳಿಗೆ ಹಕ್ಕಿಲ್ಲ ...ಈ ಪರಿಸ್ಥಿತಿಯನ್ನು ಬದಲಾಯಿಸಬಹುದೋ ? ಏನು ಮಾಡಬಹುದು ?

3.1.9
ಆಹಾರ :

ಆಹಾರದ ಅಭಾವಕ್ಕೆ ಕಾರಣ ಏನು ? ಎಲ್ಲರೂ ತಿಂದು ತೇಗುವಷ್ಟು ಆಹಾರ ಧಾನ್ಯಗಳ ಉತ್ಪನ್ನವಾಗುತ್ತಿದ್ದರೂ ಹಲವರು ಹಸಿವಿನಿಂದ ನರಳುವ ಪರಿಸ್ಥಿತಿ. ಪೌಷ್ಟಿಕ ಆಹಾರದ ಅಭಾವ — ಅದರಿಂದ ಆಗುವ ಪರಿಣಾಮಗಳು : ಹಸಿವು, ರೋಗ, ಬಾಲ್ಯಮರಣ .... ಆಹಾರದಲ್ಲಿ ಪೌಷ್ಟಿಕಾಂಶವನ್ನು ನಮ್ಮ ಆಹಾರದಿಂದಲೇ ಬರುವಂತೆ ನೋಡಿಕೊಳ್ಳಬಹುದೋ ?

3.1.10
ಹರಿಕಥೆ :

ಹರಿಕಥೆಗಳನ್ನು ಏತಕ್ಕೋಸ್ಕರ ಏರ್ಪಡಿಸುತ್ತಾರೆ ? ಹಳ್ಳಿ ಜನರ ಇತರ ಮನೋರಂಜನೆಯ ಸಾಧನಗಳಾವುವು ?—

ಹಳ್ಳಿಯ ಸಂಸ್ಕೃತಿಗೆ ತಿರಸ್ಕಾರ; ಸುಶಿಕ್ಷಿತರ, ಪಟ್ಟಣದ ಸಂಸ್ಕೃತಿಗೆ ಪುರಸ್ಕಾರ.

ನಮ್ಮ ಸಂಸ್ಕೃತಿಯ ಬಗ್ಗೆ ಸ್ವಾಭಿಮಾನ ಹೇಗೆ ಹೆಚ್ಚಿಸಬಹುದು ? ಹಳ್ಳಿಯ ಸಂಸ್ಕೃತಿಯನ್ನು ಕಾಪಾಡಲೂ ವೃದ್ಧಿಸಲೂ ಯಾವ್ಯಾವ ಕ್ರಮಗಳನ್ನು ಕೈಗೊಳ್ಳಬಹುದು ?

3.1.11
ದೇವಸ್ಥಾನ :

ದೇವರು, ಪೂಜೆ, ಹಬ್ಬ, ಜಾತ್ರೆ, ಹರಕೆಗಳು, ಆಚಾರಗಳು. ದೇವರಲ್ಲಿ ನಂಬಿಕೆ—ಅದರ ನಿಜ ಅರ್ಥ ಏನು ? ದೇವರಿಗೆ ಪ್ರತ್ಯೇಕವಾಗಿ ಮಾಡುವ ಪೂಜೆ, ಹರಕೆ, ಜಾತ್ರೆಗಳ ಸಂದರ್ಭಗಳು : ಕಾಯಿಲೆ, ಮಳೆಯ ಅಭಾವ, ಬೇರೆ ಬೇರೆ ಬೇಡಿಕೆಗಳು...."ದೇವರು ಕೊಟ್ಟ ಜೋಳಿಗೆಯನ್ನು ಗೂಟಕ್ಕೆ ತಗಲಿ ಹಾಕಿದರೆ ಹೊಟ್ಟೆ ತುಂಬುತ್ತೋ?" "ಮಂತ್ರಿಸಿದರೆ ಮಾವಿನ ಕಾಯಿ ಉದುರುವುದೇ?" ದೇವರಲ್ಲಿ ನಂಬಿಕೆ ಇಟ್ಟರೂ ಮಾನವನು ಬುದ್ಧಿ ಉಪಯೋಗಿಸಿ ಕೆಲಸ ಸಾಧನೆ ಮಾಡುವ ಅವಶ್ಯಕತೆ.

3.1.12
ಪ್ರಯಾಣ :

ಜನಸಾಮಾನ್ಯರಿಗೆ ಸಾರಿಗೆಯ ಕೊರತೆ—ಶ್ರೀಮಂತರ ಅಧೀನದಲ್ಲಿರುವ ಸಾರಿಗೆ ಸಾಧನಗಳು.

ಸಾರಿಗೆ ಅವಶ್ಯಕತೆ ಈಡೇರಿಸಲು ಏನು ಮಾಡಲು ಸಾಧ್ಯ ? ಎಲ್ಲರಿಗೂ ಉಪಯೋಗವಾಗುವಂತಹ ಸಾರಿಗೆ ಮಾಧ್ಯಮ ತರಲು ಏನು ಮಾಡಲು ಸಾಧ್ಯ ?

3.1.13
ಮೂಢನಂಬಿಕೆ :

ಮೂಢನಂಬಿಕೆ, ಒಣ ಆಚಾರ, ಮಾಟ ಮಂತ್ರಗಳ ಸಮೃದ್ಧಿ. ನಂಬಿಕೆಯು ಮೂಢನಂಬಿಕೆ ಆಗುವುದು ಯಾವಾಗ ?

ತನ್ನ ಬುದ್ಧಿ ಬಿಟ್ಟು, ಶ್ರಮ ತ್ಯಜಿಸಿ ದೇವರನ್ನೇ ಅವಲಂಬಿಸಿದಾಗ ಮಾನವ ತನ್ನ ಮಾನವತ್ವ ಬಿಡುತ್ತಾನೆ; ತನ್ನ ಜವಾಬ್ದಾರಿಯಿಂದ ವಿಮುಕ್ತನಾಗುತ್ತಾನೆ. ಇಂತಹ ಮೂಢನಂಬಿಕೆಗಳನ್ನು ಬಿಡಲು ಏನು ಮಾಡಬೇಕು ?

3.1.14 ಜ್ಞಾನ : ಒಂದು ವಸ್ತು / ವಿಷಯದ ಬಗ್ಗೆ ನಿಜವಾದ ಪರಿಚಯ. ಹಳ್ಳಿಯ ಜ್ಞಾನದ ಸಂಗತಿಗಳು–ಅವನ್ನು ಹೇಗೆ ಕಾಪಾಡಬಹುದು? ನಮ್ಮ ಹಾಗೂ ನಮ್ಮ ಪರಿಸರದ ಬಗ್ಗೆ ಹೆಚ್ಚು ಹೆಚ್ಚಿನ ಜ್ಞಾನವನ್ನು ಯಾವ ರೀತಿಯಿಂದ ತಿಳಿದುಕೊಳ್ಳಬಹುದು ? ಅದಕ್ಕೆ ನಾವು ಮಾಡಬೇಕಾದ ಕೆಲಸಕಾರ್ಯಗಳೇನು?

ಈಗಿನ ಶಿಕ್ಷಣ ವ್ಯವಸ್ಥೆಯಿಂದ ಬಹುಪಾಲು ಲಾಭ ಪಡೆಯುವವರು ಯಾರು? ಏಕೆ ಈ ಪರಿಸ್ಥಿತಿ ?

3.1.15 ಔಷಧಿ : ಆರೋಗ್ಯ ಕೆಟ್ಟಾಗ ಏನು ಮಾಡಲು ಸಾಧ್ಯ ? ಚಿಕ್ಕ ಮಕ್ಕಳನ್ನು ರೋಗದಿಂದ ಕಾಪಾಡಲು ಏನು ಮಾಡಬೇಕು ? ದೇಶದ ಆರೋಗ್ಯದವಕಾಶಗಳು ಯಾರ ಪಾಲಿಗೆ? ಪಾಶ್ಚಾತ್ಯ ಮದ್ದಿಗೂ ನಾಟಿ ಔಷಧಿಗೂ ಇರುವ ಅಂತರವೇನು ? ನಮ್ಮಲ್ಲಿ ಗಿಡಮೂಲಿಕೆಗಳ ಮದ್ದನ್ನು ಬಳಸುತ್ತಾರೆಯೇ ? ಅವನ್ನು ಇನ್ನೂ ಹೇಗೆ ಹೆಚ್ಚುಚ್ಚು ಬಳಸಿಕೊಳ್ಳಬಹುದು ?

3.1.16 ಶುಚಿತ್ವ : ಆರೋಗ್ಯ ಕೆಡಲು ಮುಖ್ಯ ಕಾರಣ ಏನು? — ದೇಹವನ್ನು, ಬಳಸುವ ವಸ್ತುಗಳನ್ನು, ಮನೆಯನ್ನು, ಊರನ್ನು ಶುಚಿಯಾಗಿ ಇಡದಿರುವುದು. ಶುಚಿತ್ವಕ್ಕೂ ಬಡತನಕ್ಕೂ ಏನು ಸಂಬಂಧ ?

3.1.17 ಐಶ್ವರ್ಯ : ಐಶ್ವರ್ಯ : ಶ್ರೀಮಂತ–ಬಡವ; ಶ್ರೀಮಂತ ರಾಷ್ಟ್ರ–ಬಡರಾಷ್ಟ್ರಗಳ ಸಂಬಂಧ, ಭೇದ. ಭೇದದ ಮೂಲ ಯಾವುದು ? ಈ ಪರಿಸ್ಥಿತಿಯನ್ನು ಬದಲಾಯಿಸಬಹುದೋ ?

## 3.2 ಹಳ್ಳಿಯ ಜೀವನಕ್ಕೆ ಸಂಬಂಧಪಟ್ಟ ಆದರೆ ಸಾಕ್ಷರತೆಗೆ ಮುಖ್ಯವಲ್ಲದ ಕೆಲವು ವಿಚಾರಗಳು ಈ ಕೆಳಗಿನಂತಿವೆ

3.2.1 ಮಳೆ : ಬೇಸಾಯಕ್ಕೆ ಮಳೆಯ ಅವಶ್ಯಕತೆ. ರೈತರು ನಿಸರ್ಗದ ಮೇಲೆ ಎಷ್ಟು ಹೊಂದಿಕೊಂಡಿದ್ದಾರೆ? ಇದನ್ನು ಬದಲಾಯಿಸಬಹುದೋ? ಹೇಗೆ ? ಯಾವ ಕ್ರಮಗಳನ್ನು ಕೈಗೊಳ್ಳಬೇಕು ?

3.2.2 ಊರು (ಜಾತಿ) : ಹಲವಾರು ಜಾತಿಗಳು ಕೂಡಿ ಇರುವ ಊರಿನ ವ್ಯವಸ್ಥೆ ಹೇಗಿದೆ ? 'ಹೊರಗಿನವರ' ಪ್ರಕಾರ — ಊರಿನ ಹೆಸರು ಎಲ್ಲಾ ಜಾತಿಗಳಿಗೂ ಅನ್ವಯಿಸುತ್ತದೆ. 'ಒಳಗಿನವರ'

ಪ್ರಕಾರ — ಊರು ಎಂದರೆ ಶ್ರೀಮಂತರು, ಸವರ್ಣೀಯರ ಮನೆಗಳಿರುವ ಭಾಗ :
ಹರಿಜನರು, ಕೀಳುಜಾತಿಯವರು ವಾಸಿಸುವ ಸ್ಥಳ — ಕೇರಿ— ಹಟ್ಟಿ, 'ಕಾಲೋನಿ'.
ಏಕೆ ಈ ಭೇದ ? — ಈ ಜಾತಿ ವ್ಯವಸ್ಥೆ ? —
ಅಸ್ಪೃಶ್ಯತೆಯ ಒಡಗು — ಆಗುವ ಅವಾಂತರಗಳು....
ಜಾತ್ಯಂತರ ತೋರಿಸಿಕೊಡುವ ಇತರ ನಿದರ್ಶನಗಳು — ಕಸುಬು, ಆಚಾರ .... ಈ ಪರಿಸ್ಥಿತಿಯನ್ನು ಹೇಗೆ ಬದಲಿಸ ಬಹುದು ? ....

3.2.3
ಅತಿಥಿ ಸತ್ಕಾರ : ಅತಿಥಿಗಳನ್ನು, ಆಗಂತುಕರನ್ನು ಏಕೆ ಸತ್ಕರಿಸುತ್ತೇವೆ ? ಗೃಹಸ್ಥ ಧರ್ಮ — ಭಾರತೀಯ ಸಂಸ್ಕೃತಿಯ ಮುಖ್ಯ ಅಂಗ, ಇದರ ಅರ್ಥ — ಬಳಲಿ ಬಂದವರಿಗೆ ಕರುಣೆ, ತಾತ್ಕಾಲಿಕ ವಾಗಿ ದಿಕ್ಕಿಲ್ಲದವರಿಗೆ ಆಶ್ರಯ. ಕರುಣೆ ಕೇವಲ ಆಕಸ್ಮಿಕವಾಗಿ ಒಮ್ಮೊಮ್ಮೆ ನಮ್ಮ ಕಡೆ ಬರುವವರಿಗೆ ಅಥವಾ ನಿಜವಾಗಿ ನರಳುವವರಿಗೆ ?
ನಮ್ಮಲ್ಲಿ ವಿಧವಿಧದ ಕಾರಣಗಳಿಂದ ನರಳುವವರಾರು ? ಗತಿ ಇಲ್ಲದವರಾರು ? ಅವರಿಗೆ ನಾವೇನು ಮಾಡಬಹುದು ?

3.2.4
ವರದಕ್ಷಿಣೆ : ವರದಕ್ಷಿಣೆಯ ಒಡಗು — ನಿದರ್ಶನಗಳು. ಆಗುವ ಅನೌಚಿತ್ಯಗಳು. ಈ ಪರಿಸ್ಥಿತಿಯನ್ನು ಬದಲಿಸಲು ಏನು ಮಾಡಬೇಕು ?

3.2.5
ಪಾಠಶಾಲೆ : ಶಾಲೆಗಳಿಂದ ಆಗುವ ಪ್ರಯೋಜನ ಏನು ? — ಜ್ಞಾನಾಭಿವೃದ್ಧಿ. ಮಕ್ಕಳನ್ನು ಪಾಠಶಾಲೆಗೆ ಕಳುಹಿಸುವ ಅಭ್ಯಾಸ.

3.2.6
ಸರಕಾರ : ಅಧಿಕಾರ ಯಾರ ಕೈಯಲ್ಲಿದೆ ? ಜನರಿಗೆ ಅಧಿಕಾರದಲ್ಲಿ ಪಾಲಿ ದೆಯೋ ? ಯೋಗ್ಯ ವಿಧಾನಸಭಾ ಮತ್ತು ಸಂಸತ್ ಸದಸ್ಯ ರನ್ನು ಆಯ್ಕೆ ಮಾಡುತ್ತೇವೋ ? ಅಂತಹ ಚುನಾಯಿತ ಸದಸ್ಯರು ಜನರ ಹಿತಕ್ಕೆ ದುಡಿಯುತ್ತಾರೋ ? ಅವರು ತಮ್ಮ

ಜವಾಬ್ದಾರಿಯನ್ನು ನಡೆಸುವಂತೆ ನಾವು ಏನು ಮಾಡಬೇಕು ? ಯೋಗ್ಯ ಸದಸ್ಯರನ್ನು ಚುನಾಯಿಸಲು ನಾವು ಏನನ್ನು ಮಾಡಬೇಕು ?

3.2.7

ಕೆಲಸ : ಕೈಕೆಲಸಕ್ಕೂ ಬುದ್ಧಿ ಕೆಲಸಕ್ಕೂ ಸಿಗುವ ಮನ್ನಣೆಗಳು. ಏಕೆ ಈ ವ್ಯತ್ಯಾಸ ? — ಕೆಲಸ ಮಾಡುವುದು ಪ್ರತಿ ಮನುಷ್ಯನ ಕರ್ತವ್ಯ; ಆದರೆ ಅಗತ್ಯವಿರುವ ಅವಶ್ಯಕತೆಗಳು ಮಾನವರಾಗಿ ಎಲ್ಲರಿಗೂ ಸಮಾನ.

3.2.8

ಕೈಗಾರಿಕೆ/ ಕಸುಬು : ಪಟ್ಟಣದಲ್ಲಿಯ ದೊಡ್ಡ ಕಾರ್ಖಾನೆಗಳು — ಉದಾಹರಣೆಗಳು. ಸಣ್ಣ ಕೈಗಾರಿಕೆಗಳು — ನಿದರ್ಶನಗಳು. ನಮ್ಮ ಆದಾಯವನ್ನು ಹೆಚ್ಚಿಸುವ ದಾರಿಗಳು : ನಾವೇನಾದರೂ ಗೃಹ ಕೈಗಾರಿಕೆ, ಉಪಕಸುಬುಗಳನ್ನು ನಡೆಸಬಹುದೋ ?

3.2.9

ಕೂಟ (ಸಂಘ) : ಜನರೆಲ್ಲಾ ಕೂಡಿ ಕೆಲಸ ಮಾಡುವ, ಕೂಡಿ ಬಾಳುವ ವೈಚಿತ್ರ್ಯ. ಯಾವ ಯಾವ ಸಂದರ್ಭಗಳಲ್ಲಿ ಕೂಡಿಕೊಳ್ಳಬಹುದು ? ಯೋಗ್ಯ ಕೂಟ (ಸಂಘ)ವನ್ನು ನಿರ್ಮಿಸಬಹುದೋ ? ನಿಯಮಗಳೇನು? ಜವಾಬ್ದಾರಿಗಳಾವುವು ?

## 3.3 ಅಕ್ಷರಜ್ಞಾನದ ವಿವಿಧ ಹಂತಗಳು

3.3.1 ಮೊದಲ ಸೂತ್ರದಲ್ಲಿರುವ ಜನಕಶಬ್ದವನ್ನು ತೋರಿಸಿ ಓದಿಸುವುದು. ಉದಾ : ಜಗಳ.

3.3.2 ಸೂತ್ರವಿಲ್ಲದೆ ಬರೀ ಶಬ್ದವನ್ನು ಬರೆದು ತೋರಿಸಿ ಓದಿಸುವುದು. ಚರ್ಚಾಕೂಟದ ಸಮಯದಲ್ಲೇ ಪ್ರೇರಕನು ಕಪ್ಪುಹಲಗೆಯ ಮೇಲೆ ಶಬ್ದವನ್ನು ಹೊಸದಾಗಿ ಬರೆಯುವುದರ ಬದಲು, ಮೊದಲೇ ಒಂದು ಹಾಳೆಯಲ್ಲಿ ಶಬ್ದವನ್ನು ಬರೆದು ಆ ಹಾಳೆಯನ್ನು ತೋರಿಸಬಹುದು. ಇದೇ ಕ್ರಮವನ್ನು ಮುಂದಿನ ಹಂತಗಳಲ್ಲೂ ಹೊಸ ಜ್ಞಾನದ ಅರಿವು ಬರುವ ಸಂದರ್ಭಗಳಲ್ಲೂ ಬಳಸಬಹುದು.

3.3.3 ಶಬ್ದದ ಅಕ್ಷರ (ಉಚ್ಚಾರಣಾ ಘಟಕ)ಗಳನ್ನು ಬಿಡಿಬಿಡಿಯಾಗಿ ಬರೆದು ಓದಿಸುವುದು.

ಉದಾ : ಜ ಗ ಳ.

3.3.4 ಮೊದಲನೇ ಅಕ್ಷರವನ್ನು ಬರೆದು ಓದಿಸುವುದು ಮತ್ತು ಅದನ್ನು ವಯಸ್ಕರು ಬರೆಯುವಂತೆ ನೋಡಿಕೊಳ್ಳುವುದು. ಉದಾ : ಜ

3.3.5 ಜ ಅಕ್ಷರದ ಎಲ್ಲಾ ಕಾಗುಣಿತಗಳನ್ನು ಒಂದರ ಕೆಳಗೆ ಒಂದರಂತೆ ಬರೆದು ಸ್ವಲ್ಪಕಾಲ ವಯಸ್ಕರು ಅದನ್ನು ಗಮನಿಸಲಿಕ್ಕೆ ಹೇಳುವುದು.

ಉದಾ :
ಜ
ಜಾ
ಜಿ
ಜೀ
ಜು
ಜೂ
ಜೃ
ಜೆ
ಜೇ
ಜೈ
ೊ
ಜೋ
ಜೌ
ಜಂ
ಜಃ

ಈ ಕಾಗುಣಿತಗಳ ಪಟ್ಟಿಯಿಂದ ವಯಸ್ಕರು ಕೇವಲ ಜ 'ಅಕ್ಷರ'ವನ್ನು ಗುರುತಿಸುತ್ತಾರೆ. ಉಳಿದ ಅಕ್ಷರಗಳನ್ನು ವಯಸ್ಕರೇ ತಮ್ಮ ಬುದ್ಧಿಶಕ್ತಿಯನ್ನು ಉಪಯೋಗಿಸಿ ತಿಳಿಯುವಂತೆ ಪ್ರೇರಕ ಮಾಡಬೇಕಾದುದೇನು ?

ಓದಲಿಕ್ಕೂ ಬರೆಯಲಿಕ್ಕೂ ಕಲಿಯುವುದು ಒಂದು ಜ್ಞಾನಾರ್ಜನೆಯ ಕೃತಿ. ಬಾಯಿಪಾಠದಿಂದ ಅಥವಾ ನೆನಪಿನಿಂದ ಮಾಡುವ ಕೆಲಸವಲ್ಲ ಎಂದು ಮನಗಂಡಿದ್ದ ಪ್ರೇರಕನು, ಹೊಸ ಜ್ಞಾನವನ್ನು ಒಂದು ಸಮಸ್ಯೆಯ ರೂಪದಲ್ಲಿ ವಯಸ್ಕರ ಮುಂದಿಡುತ್ತಾನೆ. ಹೊಸ ವಿಷಯದ ಜ್ಞಾನವು ಸಮಸ್ಯೆಯನ್ನು ಪರಿಹಾರ ಮಾಡು ವುದರ ಮೂಲಕ ಬರುವುದರಿಂದ ಅದು ಕೇವಲ ಪ್ರೇರಕರಿಂದ ಪಡೆದ ಕೊಡುಗೆ ಎಂದು ವಯಸ್ಕರಿಗೆ ಅನಿಸುವುದಿಲ್ಲ. ಬದಲಾಗಿ ತಾವೇ ಕ್ರಿಯಾತ್ಮಕವಾಗಿ ಗಳಿಸಿದ ಸೊತ್ತು ಎಂದು ಲೆಕ್ಕಿಸುತ್ತಾರೆ. ಹೊಸ ಜ್ಞಾನವು ಸಮಸ್ಯಾತ್ಮಕವಾಗಿ ಮೂಡಿಬರಲು ಪ್ರೇರಕನು ಎರಡು ಪ್ರಶ್ನೆಗಳನ್ನು ಕೇಳುತ್ತಾನೆ. ಪ್ರತಿ ಪ್ರಶ್ನೆಗೆ ವಯಸ್ಕರೇ ಉತ್ತರ ಕಂಡುಹಿಡಿಯುವಲ್ಲಿ ಸ್ವಲ್ಪ ಸಮಯ ಹಿಡಿಯಬಹುದು. ಅಂತಹ ಮೌನ ನಿಮಿಷಗಳ ಜಡತೆಯನ್ನು ತಾಳಲಾರದೇ ಪ್ರೇರಕನು ತಾನೇ ಉತ್ತರ ಕೊಡುವ ಪ್ರವೃತ್ತಿಗೆ ಇಳಿಯುವ ಸಂಭವವಿದೆ. ಆದರೆ ಆ ಮೌನವು ರಚನಾತ್ಮಕ ಕೃತಿಯ ಅತ್ಯವಶ್ಯಕ ಅಂಗ ಎಂದು ಅರಿತಿದ್ದ ಪ್ರೇರಕನು ವಯಸ್ಕರೇ ನಿಜೋತ್ತರವನ್ನು ಕಂಡು ಹಿಡಿಯುವಲ್ಲಿ ಸಹಾಯಕನಾಗುತ್ತಾನೆ.

ಪ್ರೇರಕನು ಕೇಳುವ ಪ್ರಶ್ನೆಗಳು ಈ ರೀತಿ ಇವೆ: "ಈ ಎಲ್ಲಾ ಅಕ್ಷರಗಳಲ್ಲಿ ಒಂದೇ ರೀತಿಯಾಗಿರುವ ಭಾಗ ಮತ್ತು ಬೇರೆ ಬೇರೆ ರೀತಿಯಾಗಿರುವ ಭಾಗ ಏನಾ ದರೂ ಇದೆಯೋ ? ಅವು ಯಾವುವು ?" ಕೆಲವು ಸಂಶಯಪೂರ್ವಕ ಮೌನಕ್ಷಣಗಳ ನಂತರ ಒಬ್ಬ ವಯಸ್ಕ ಈ ರೀತಿ ಹೇಳಬಹುದು : "ಎಲ್ಲವೂ ಒಂದೇ ರೀತಿ ಶುರು ಆಗುತ್ತವೆ. ಆದರೆ ಬೇರೆ ಬೇರೆ ರೀತಿಗಳಲ್ಲಿ ಅವು ಅಂತ್ಯಗೊಳ್ಳುತ್ತವೆ."

ಈ ಜ್ಞಾನದ ಅರಿವು ಎಲ್ಲರಲ್ಲೂ ಮೂಡಿದ ಮೇಲೆ ಪ್ರೇರಕ ಇನ್ನೊಂದು ಪ್ರಶ್ನೆಯನ್ನು ಕೇಳುತ್ತಾನೆ : "ಎಲ್ಲವೂ ಒಂದೇ ರೀತಿ ಶುರು ಆಗಿ, ಬೇರೆ ಬೇರೆ ರೀತಿ ಗಳಲ್ಲಿ ಅಂತ್ಯವಾದರೆ, ಅವೆಲ್ಲವನ್ನೂ 'ಜ' ಎಂದೇ ಕರೆಯಬಹುದೋ ?" ಸ್ವಲ್ಪಕಾಲದ ನಂತರ ವಯಸ್ಕರು "ಇಲ್ಲ" ಎಂದು ಉತ್ತರಿಸುವರು.

ಈ ಹಂತದಲ್ಲಿ ಪ್ರೇರಕ ಹೊಸ ಜ್ಞಾನದ ಪರಿಚಯವನ್ನು ವಯಸ್ಕರಿಗೆ ಮಾಡಿ ಕೊಡುತ್ತಾನೆ. ಎಲ್ಲಾ ಕಾಗುಣಿತಾಕ್ಷರಗಳ ಬೇರೆ ಬೇರೆ ಉಚ್ಚಾರ ಹಾಗೂ ಅವನ್ನು ಬರೆಯುವ ರೀತಿಯನ್ನು ತೋರಿಸಿಕೊಡುತ್ತಾನೆ. ಸಮಸ್ಯೆಯ ರೂಪದಲ್ಲಿ ಹೊಸ ಜ್ಞಾನವು ಬಂದಿರುವುದರಿಂದ ಅದು ಕೇವಲ 'ದಾನ' ಎನಿಸುವುದಿಲ್ಲ.

3.3.6 ಇದೇ ಪ್ರಕಾರ ಶಬ್ದದ ಉಳಿದ ಅಕ್ಷರಗಳ ಪರಿಚಯವಾಗುವುದು.
ಉದಾ : ಗ, ಳ ಮತ್ತು ಅವುಗಳ ಕಾಗುಣಿತಗಳು.

3.3.7 ಎಲ್ಲಾ ಅಕ್ಷರಗಳ ಪರಿಚಯವಾದ ಮೇಲೆ ಕಲಿತ ಅಕ್ಷರಗಳ ಕಾಗುಣಿತಗಳನ್ನು ಅಡ್ಡಕ್ಕೆ ಅಂದರೆ ಒಂದರ ನಂತರ ಒಂದರಂತೆ, ಸಾಲಾಗಿ ಪ್ರೇರಕನು ಬರೆಯುವನು.

ಉದಾ : ಜ ಜಾ ಜಿ ಜೀ ಜು ಜೂ ಜೃ ಜೆ ಜೇ ಜೈ ಜೊ ಜೋ ಜೌ ಜಂ ಜಃ
ಗ ಗಾ ಗಿ ಗೀ ಗು ಗೂ ಗೃ ಗೆ ಗೇ ಗೈ ಗೊ ಗೋ ಗೌ ಗಂ ಗಃ
ಳ ಳಾ ಳಿ ಳೀ ಳು ಳೂ ಳೃ ಳೆ ಳೇ ಳೈ ಳೊ ಳೋ ಳೌ ಳಂ ಳಃ

ಎಲ್ಲಾ ಸಾಲುಗಳನ್ನು ಪ್ರೇರಕನು ಮೊದಲು ಅಡ್ಡಕ್ಕೆ ಓದಿಸುತ್ತಾನೆ. ನಂತರ ನೇರಕ್ಕೆ, ಅಂದರೆ ಒಂದರ ಕೆಳಗೆ ಒಂದು, ಇರುವ ಅಕ್ಷರಗಳನ್ನು ಒಂದು ಸಾಲು ಎಂಬ ಲೆಕ್ಕದಲ್ಲಿ ಪ್ರೇರಕನು ಓದಿಸುವನು. ಮೊದಲ ನೇರ ಸಾಲನ್ನು ಓದಿಸಿದ ನಂತರ ಪ್ರೇರಕ ಈ ಕೆಳಗಿನ ಪ್ರಶ್ನೆಗಳನ್ನು ಕೇಳುತ್ತಾನೆ : "ಈ ಎಲ್ಲಾ ಬೇರೆ ಬೇರೆ ಅಕ್ಷರಗಳಲ್ಲಿ ಒಂದೇ ರೀತಿಯಾಗಿರುವ ಭಾಗ ಯಾವುದಾದರೂ ಇದೆಯೋ ?" ಸ್ವಲ್ಪ ಸಮಯದ ಮೌನದ ನಂತರ ವಯಸ್ಕರು ಈ ರೀತಿ ಉತ್ತರಿಸುವರು :

"ಎಲ್ಲಾ ಅಕ್ಷರಗಳಲ್ಲಿ ಕೊನೆಯ ಭಾಗ ಒಂದೇ ರೀತಿ ಇದೆ. ಆದರೆ ಅವು ಬೇರೆ ಬೇರೆ ರೀತಿಯಲ್ಲಿ ಶುರು ಆಗುತ್ತವೆ."

ನಂತರ ಪ್ರೇರಕನು ಈ ರೀತಿ ಕೇಳುವನು : "ಎಲ್ಲಾ ಅಕ್ಷರಗಳ ಕೊನೆಯ ಭಾಗ ಒಂದೇ ರೀತಿ ಇದ್ದರೆ, ಆ ಕೊನೆಯ ಭಾಗ ಸೂಚಿಸುವ ಉಚ್ಚಾರವೂ ಒಂದೇ ರೀತಿ ಇದೆ ? ಅದು ಯಾವುದು?" ವಯಸ್ಕರು ಸಂದೇಹದಿಂದಲೇ "ಹೌದು" ಎಂದು ಉತ್ತರಕೊಟ್ಟು, ಬೇರೆ ಬೇರೆ ಪ್ರಯತ್ನಗಳ ಮೂಲಕ ಎಲ್ಲಾ ಅಕ್ಷರಗಳ ಕೊನೆಯಲ್ಲಿ ಬರುವ 'ಅ' ಉಚ್ಚಾರವನ್ನು ಕಂಡುಹಿಡಿಯುವರು.

ಈ ಹಂತದಲ್ಲಿ ಪ್ರೇರಕನು ಇನ್ನೂ ಹೊಸ ಜ್ಞಾನದ ಅರಿವನ್ನು ವಯಸ್ಕರಲ್ಲಿ ಮೂಡಿಸುವನು. 'ಅ' ಸ್ವರ ಬೇರೆ ಅಕ್ಷರದೊಡನೆ ಸೇರಿದಾಗ ಒಂದು ಕೋಡಿನಂತಿದ್ದು (ˉ), ಸ್ವತಂತ್ರವಾಗಿ ಬಂದಾಗ 'ಅ' ರೂಪದಲ್ಲಿ ಬರುತ್ತದೆ ಎಂದು ಪ್ರೇರಕನು ತೋರಿಸುತ್ತಾನೆ. ವಯಸ್ಕರು 'ಅ' ಅಕ್ಷರವನ್ನು ಓದಲೂ ಬರೆಯಲೂ ಕಲಿಯುವರು.

3.3.8 ಇದೇ ಪ್ರಕಾರ ಉಳಿದ ನೇರ ಸಾಲುಗಳ ಮೂಲಕ ಎಲ್ಲಾ ಸ್ವರಗಳನ್ನು ಓದಲೂ ಬರೆಯಲೂ ಪ್ರೇರಕನು ತೋರಿಸುತ್ತಾನೆ.

ಆ ಇ ಈ ಉ ಊ ಋ ಎ ಏ ಐ ಒ ಓ ಔ ಅಂ ಅಃ

3.3.9 ಎಲ್ಲಾ ಸ್ವರಗಳ ಜ್ಞಾನ ಬಂದಮೇಲೆ ಪ್ರೇರಕನು ಒಂದರ ಕೆಳಗೆ ಒಂದರಂತೆ ಕ್ರಮವಾಗಿ 'ಜ' ದ ಸಾಲನ್ನೂ 'ಗ' ದ ಸಾಲನ್ನೂ 'ಳ' ದ ಸಾಲನ್ನೂ ಸ್ವರಗಳ ಸಾಲನ್ನೂ ಬರೆಯುತ್ತಾನೆ. ಉದಾ :

ಜ ಜಾ ಜಿ ಜೀ ಜು ಜೂ ಜೃ ಜೆ ಜೇ ಜೈ ಜೊ ಜೋ ಜೌ ಜಂ ಜಃ
ಗ ಗಾ ಗಿ ಗೀ ಗು ಗೂ ಗೃ ಗೆ ಗೇ ಗೈ ಗೊ ಗೋ ಗೌ ಗಂ ಗಃ
ಳ ಳಾ ಳಿ ಳೀ ಳು ಳೂ ಳೃ ಳೆ ಳೇ ಳೈ ಳೊ ಳೋ ಳೌ ಳಂ ಳಃ
ಅ ಆ ಇ ಈ ಉ ಊ ಋ ಎ ಏ ಐ ಒ ಓ ಔ ಅಂ ಅಃ

ಈ ಸಾಲುಗಳನ್ನು ಪ್ರೇರಕನು ಅಡ್ಡಕ್ಕೂ ನೇರಕ್ಕೂ ಓದಿಸುತ್ತಾನೆ. ಹಾಗೆಯೇ ಯಾವ ಕ್ರಮವಿಲ್ಲದೇ ಅಕ್ಷರಗಳನ್ನು ಬಿಟ್ಟು ಬಿಟ್ಟು ಅವನು ಓದಿಸುತ್ತಾನೆ. ಈ ರೀತಿಯ ಪುನರಾವರ್ತನೆಯಿಂದ ಕಲಿತ ಅಕ್ಷರಗಳ ಜ್ಞಾನವು ವಯಸ್ಕರಿಗೆ ಇನ್ನೂ ಬೇರೂರಿ ನಿಲ್ಲುವುದು. ಈ ಕಾರ್ಯ ಮುಗಿದ ಮೇಲೆ ಪ್ರೇರಕನು ಇನ್ನೊಂದು ಪ್ರಶ್ನೆಯನ್ನು ಕೇಳುತ್ತಾನೆ: "ನಾವು ಕಾಣುವ ಬೇರೆ ಬೇರೆ ಅಕ್ಷರಗಳಿಂದ ಏನನ್ನಾದರೂ ನಾವು ರಚಿಸಬಹುದೋ ?" ಪುನಃ ಸ್ವಲ್ಪ ಕಾಲದವರೆಗೆ ವಯಸ್ಕರು ಮೌನತಾಳಿ ಕೊಂಡಿರಬಹುದು. ಆದರೆ ನಿಧಾನವಾಗಿ ಶಬ್ದ ರಚನೆಯ ಗುಟ್ಟು ಬಯಲಾಗಿ ಬೇರೆ ಬೇರೆ ಅಕ್ಷರಗಳ ಬೇರೆ ಬೇರೆ ರೀತಿಯ ಜೋಡಣೆಯಿಂದ ತಮ್ಮ ಭಾಷೆಯಲ್ಲಿ ಉಪ ಯೋಗಿಸಲ್ಪಡುತ್ತಿರುವ ಹಲವಾರು ಶಬ್ದಗಳನ್ನು ಅವರು ಕಂಡುಹಿಡಿಯುವರು. ಒಬ್ಬನು ಜಗಳ ಎಂದು ಕಂಡುಹಿಡಿದರೆ, ಮತ್ತೊಬ್ಬನು ಗಳ, ಇನ್ನೊಬ್ಬನು ಗಜ, ಹೀಗೆ ಹೇಳುತ್ತಾ ಮುಂದುವರಿಯಬಹುದು. ಕೂಡಲೇ ಎಲ್ಲರೂ ಶಬ್ದ ಜೋಡಣೆಯ ಆಟದಲ್ಲಿ ಮಗ್ನರಾಗಿ 'ಹೊಸ ವಿಷಯವನ್ನು ತಾವೇ ಕಂಡುಹಿಡಿದೆವು', ಎಂಬ ಸಂತೋಷದಿಂದ 'ತಾನು ಮುಂದು ತಾನು ಮುಂದು' ಎನ್ನುತ್ತಾ ಹಲವಾರು ಶಬ್ದಗಳ ರಾಶಿಯನ್ನೇ ಮಾಡುವರು. ಉದಾ : ಜಾಗ, ಗಾಳ, ಆಗ, ಜಗಿ, ಆಳ........ಹೀಗೆ ಸೂತ್ರದಲ್ಲಿ ಮೂಲತಃ ಬಂದ ಶಬ್ದ ಜನಕಶಬ್ದವಾಗಿದ್ದು ಅದರಿಂದ ಹಲವಾರು ಜನ್ಯ ಶಬ್ದಗಳನ್ನು ವಯಸ್ಕರು ಕಂಡುಹಿಡಿಯುವರು,

3.3.10 ಇದೇ ರೀತಿ ಬೇರೆ ಬೇರೆ ಸಮಸ್ಯೆಗಳನ್ನು ತೋರಿಸುವ ಉಳಿದ ಜನಕ ಶಬ್ದಗಳನ್ನು ಕ್ರಮವಾಗಿ ಎತ್ತಿಕೊಂಡು ಮುಂದುವರಿಯಬೇಕಾಗುವುದು.

ಎರಡನೇ ಜನಕಶಬ್ದದ ಅರಿವು ಆದ ಮೇಲೆ, ಎರಡೂ ಜನಕಶಬ್ದಗಳಲ್ಲಿ ಬರುವ ಅಕ್ಷರಗಳನ್ನು ಬೇರೆ ಬೇರೆ ರೀತಿಯಲ್ಲಿ ಕೂಡಿಸಿ ಹೊಸ ಹೊಸ ಶಬ್ದಗಳನ್ನು ವಯಸ್ಕರು ಕಂಡುಹಿಡಿಯುವರು. ಇದೇ ರೀತಿ ಮೂರನೇ, ನಾಲ್ಕನೇ ಮತ್ತು ಐದನೇ ಜನಕಶಬ್ದಗಳ ವಿವೇಚನೆ ನಡೆಯುವುದು.

3.3.11 ಐದು ಅಥವಾ ಆರು ಜನಕಶಬ್ದಗಳನ್ನು ಕಲಿತ ಮೇಲೆ, ಶಬ್ದಗಳನ್ನು ಬೇರೆ ಬೇರೆ ರೀತಿಯಲ್ಲಿ ಜೋಡಿಸಿ ಮಾತುಗಳನ್ನು ರಚಿಸುವ ತತ್ವವನ್ನು ವಯಸ್ಕರು ಕಂಡುಹಿಡಿಯುವರು. ಅವರು ಪೋಣಿಸಿದ ವಾಕ್ಯಗಳಲ್ಲಿ ಅವರ ಜೀವನದ ಅನುಭವವು ಸರಳವಾಗಿಯೂ ಕಾವ್ಯಾತ್ಮಕವಾಗಿಯೂ ಪ್ರತಿಬಿಂಬಿಸುವುದು.

ಹೀಗೆ ಪ್ರತಿ ಹಂತದಲ್ಲೂ ವಯಸ್ಕರು ರಚನಾತ್ಮಕವಾಗಿ ಭಾಗವಹಿಸಿ ಸಂವಾದದ ಮೂಲಕ ಜ್ಞಾನಾರ್ಜನೆಯು ತಾವೇ ಗಳಿಸಿದ ಸಂಗತಿ ಎಂಬ ಅರಿವಾಗಿ ಹೆಮ್ಮೆಯಿಂದ ಹಾಗೂ ಸಂತೋಷದಿಂದ ಮುಂದುವರಿಯುವರು. ಕನ್ನಡ ಭಾಷೆಯ ಲಿಪಿಯ ಇನ್ನೂ ಕೆಲವು ವೈಶಿಷ್ಟ್ಯಗಳನ್ನು ಇದೇ ರೀತಿ ರಚನಾತ್ಮಕವಾಗಿಯೇ ವಯಸ್ಕರು ಸಮಸ್ಯೆಯನ್ನು ಬಗೆಹರಿಸಿ ಕಂಡುಹಿಡಿಯುವಂತೆ ಪ್ರೇರಕನು ಅವಕಾಶವನ್ನು ಕಲ್ಪಿಸಬೇಕಾಗುವುದು.

3.3.12 ಒತ್ತಕ್ಷರಗಳ ಜ್ಞಾನ

ಒತ್ತಕ್ಷರಗಳನ್ನು ಮೂಲಾಕ್ಷರಗಳಿಂದ ಹೆಚ್ಚು ಬದಲಾವಣೆಯಾಗದೇ ಬರುವ ಒತ್ತಕ್ಷರಗಳು ಮತ್ತು ಹೆಚ್ಚು ಬದಲಾವಣೆಯಾಗಿ ಬರುವ ಒತ್ತಕ್ಷರಗಳು ಎಂದು ಎರಡು ಭಾಗ ಮಾಡಬಹುದು. ಮೊದಲು ಮೂಲಾಕ್ಷರದಿಂದ ಹೆಚ್ಚು ಬದಲಾವಣೆಯಾಗದ ಒತ್ತಕ್ಷರಗಳನ್ನು ಗಮನಿಸುವುದು ಒಳ್ಳೆಯದು.

ಸೂತ್ರಮಾಲೆಯನ್ನು ರಚಿಸುವಾಗ ಮನಸ್ಸಿನಲ್ಲಿಟ್ಟುಕೊಳ್ಳಬೇಕಾದ ವಿಷಯವೇನೆಂದರೆ ಮೂಲಾಕ್ಷರದಿಂದ ಹೆಚ್ಚು ಬದಲಾವಣೆಯಾಗದ ಒತ್ತಕ್ಷರವಿರುವ ಜನಕಶಬ್ದದ ವಿವೇಚನೆ ಬರುವ ಮೊದಲು, ಆ ಒತ್ತಕ್ಷರದ ಮೂಲಾಕ್ಷರವಿರುವ ಶಬ್ದ ಬರುವಂತೆ ನೋಡಿಕೊಳ್ಳಬೇಕು. ಅಂದರೆ ಒತ್ತಕ್ಷರವಿರುವ ಜನಕಶಬ್ದವನ್ನು ಕಲಿಯುವ ಮೊದಲು ವಯಸ್ಕರಿಗೆ ಅದೇ ಅಕ್ಷರದ ಮೂಲರೂಪ ಗೊತ್ತಿರುತ್ತದೆ. ಉದಾ : ಅಮಲಗೋದಿಯ ಸೂತ್ರಮಾಲೆಯಲ್ಲಿ 10ನೇ ಜನಕಶಬ್ದ ಹರಿಕಥೆ ಆಗಿದ್ದು ನಂತರ ದೇವಸ್ಥಾನ ಎಂಬ ಜನಕಶಬ್ದ ಬಂದಿರುತ್ತದೆ.

ದೇವಸ್ಥಾನ ಶಬ್ದದಲ್ಲಿಯ ಹೊಸ ಅಕ್ಷರಗಳ ಪರಿಚಯವನ್ನು ಮೇಲೆ ಹೇಳಿದ ಕ್ರಮವನ್ನನುಸರಿಸಿ ಪಡೆದ ನಂತರ ಪ್ರೇರಕನು ಒತ್ತಕ್ಷರವಾಗಿದ್ದ ' ್ಥ ' ಅಕ್ಷರವನ್ನು ಪ್ರತ್ಯೇಕವಾಗಿ ತೋರಿಸುವನು. ಅದರ ಎಡಬದಿಗೆ ಥ ಅಕ್ಷರದ ಕಾಗುಣಿತಗಳನ್ನು ನೇರ ಸಾಲಾಗಿ ಅವನು ಬರೆಯುವನು ಮತ್ತು ಅವನ್ನು ಗಮನಿಸಲಿಕ್ಕೆ ವಯಸ್ಕರನ್ನು ಕೇಳುವನು.

ಉದಾ : ಥ      ್ಥ
⋮
ಥಃ

ಸ್ವಲ್ಪ ಸಮಯದ ನಂತರ ಪ್ರೇರಕನು ವಯಸ್ಕರಿಗೆ ಈ ಪ್ರಶ್ನೆ ಹಾಕುವನು : “ನೇರ ಸಾಲಿನಲ್ಲಿರುವ ಅಕ್ಷರಗಳಿಗೂ ಬಲಬದಿಯಲ್ಲಿ ಬರೆದಿರುವ ಅಕ್ಷರಕ್ಕೂ ಏನು ವ್ಯತ್ಯಾಸವಿದೆ?” ವಯಸ್ಕರು ವ್ಯತ್ಯಾಸವನ್ನು ಗಮನಿಸಿ “ಬಲಬದಿಯಲ್ಲಿದ್ದ ಅಕ್ಷರ ಸಾಲಿನಲ್ಲಿದ್ದ ಅಕ್ಷರಗಳನ್ನು ಹೋಲುತ್ತದೆ. ಆದರೆ ಅದು ಉಳಿದವುಗಳಿಗಿಂತ ಚಿಕ್ಕದಾಗಿಯೂ ‘ತಲೆಕಟ್ಟು’ ಇಲ್ಲದೆಯೂ ಬಂದಿದೆ” ಎಂದು ಉತ್ತರಿಸಬಹುದು. ಹೀಗೆ ಪ್ರೇರಕನು ಸಾಮಾನ್ಯವಾಗಿ ಎಲ್ಲಾ ಅಕ್ಷರಗಳ ಒತ್ತಕ್ಷರದ ಸ್ವರೂಪವನ್ನು ತೋರಿಸಿಕೊಡುವನು. ಒಂದು ಅಕ್ಷರವನ್ನು ಚಿಕ್ಕದಾಗಿ ತಲೆಕಟ್ಟು ಇಲ್ಲದೇ ಇನ್ನೊಂದು ಅಕ್ಷರದ ಕೆಳಗೆ ಬರೆದರೆ ಅದು ಒತ್ತಕ್ಷರವಾಗುತ್ತದೆ. ಮೂಲಾಕ್ಷರದಿಂದ ಬೇರೆ ರೂಪ ಇರುವ ಮತ್ತು ಮೂಲಾಕ್ಷರವನ್ನೇ ಆಕಾರದಲ್ಲಿ ಸಂಪೂರ್ಣವಾಗಿ ಹೋಲುವ ಒತ್ತಕ್ಷರಗಳ ಬಗ್ಗೆ ಈ ಹಂತದಲ್ಲಿ ಏನೂ ಹೇಳುವುದಿಲ್ಲ.

### 3.3.13 ಮೂಲಾಕ್ಷರದಿಂದ ಹೆಚ್ಚು ಬದಲಾವಣೆಯಾಗುವ ಒತ್ತಕ್ಷರಗಳು

ಆಮಲಗೊಂದಿಯ ಸೂತ್ರನಾಲೆಯಲ್ಲಿ 12ನೇ ಜನಕಶಬ್ದ ಪ್ರಯಾಣ. ಇದು ದೇವಸ್ಥಾನ ಜನಕಶಬ್ದದ ನಂತರವೇ ಬರುತ್ತದೆ. ಪ್ರಯಾಣ ಪದದಲ್ಲಿ ' ್ರ ' ಚಿಹ್ನೆ ರಕಾರದ ಒತ್ತಕ್ಷರ ರೂಪ. ಅದು ಮೂಲಾಕ್ಷರವನ್ನು ಅಷ್ಟು ಹೋಲುವುದಿಲ್ಲ. ಪ್ರಯಾಣ ಶಬ್ದದ ಮೊದಲು 'ರ'ಕಾರ ಬರುವಂತೆ ನೋಡಿಕೊಳ್ಳಬೇಕು. ಅದೇ ರೀತಿ ಉಳಿದ ಇಂತಹ ಒತ್ತಕ್ಷರ ಇರುವ ಮೂಲಾಕ್ಷರಗಳ ಪರಿಚಯವೂ ಈಗಾಗಲೇ ಆಗಿರಬೇಕು. ಆಮಲಗೊಂದಿಯ ಸೂತ್ರನಾಲೆಯಲ್ಲಿ ಪ್ರಯಾಣ ಜನಕಶಬ್ದದ ಮೊದಲು 'ರ' ಕಾರ 9ನೇ ಆಹಾರ ಪದದಲ್ಲಿದೆ; 'ಲ' ಕಾರ 3ನೇ ಕೂಲಿ ಪದದಲ್ಲಿದೆ; 'ಮ' ಕಾರ 4ನೇ ಭೂಮಿ ಪದದಲ್ಲಿದೆ; 'ತ' ಕಾರ 5ನೇ ಜೀತ ಪದದಲ್ಲಿದೆ; 'ನ' ಕಾರ 11ನೇ ದೇವಸ್ಥಾನ ಪದದಲ್ಲಿದೆ; ಮತ್ತು 'ಯ' ಕಾರ ಪ್ರಯಾಣ ಪದದಲ್ಲೇ ಇದೆ.

ಪ, ಯಾ, ಣ ಅಕ್ಷರಗಳ ಪರಿಚಯವಾದ ಮೇಲೆ ಪ್ರೇರಕನು ಕೆಲವು ಪ್ರಶ್ನೆಗಳ ಮುಖಾಂತರ ಮೂಲಾಕ್ಷರಗಳಿಂದ ಹೆಚ್ಚು ಬದಲಾವಣೆಯಾಗಿ ಬರುವ ಒತ್ತಕ್ಷರಗಳ ಜ್ಞಾನ ಬರುವಂತೆ ನೋಡಿಕೊಳ್ಳುತ್ತಾನೆ. ‘್ರ’ ಚಿಹ್ನೆಯನ್ನು ಬರೆದು, “ಈ ಚಿಹ್ನೆ ಏನು ?” ಎಂದು ವಯಸ್ಕರನ್ನು ಕೇಳುತ್ತಾನೆ. ಅದಕ್ಕೆ ಅವರು “ಅದು ಒಂದು ಒತ್ತಕ್ಷರವೇ ಇರಬೇಕು” ಎಂದು ಉತ್ತರ ಕೊಡುವರು. ನಂತರ ಪ್ರೇರಕನು “ಪ್ರಯಾಣ ಶಬ್ದದಲ್ಲಿ ಬರುವ ಉಚ್ಚಾರಗಳು ಯಾವುವು ?” ಎಂದು ಪ್ರಶ್ನೆ ಹಾಕುತ್ತಾನೆ. “ಅದರಲ್ಲಿ ಪ್, ರ, ಯಾ ಮತ್ತು ಣ ಉಚ್ಚಾರಗಳು ಬರುತ್ತವೆ” ಎಂದು ವಯಸ್ಕರು ಉತ್ತರಿಸುವರು. “ಪ ಉಚ್ಚಾರದ ಚಿಹ್ನೆ ಪ, ಯಾ ಉಚ್ಚಾರದ ಚಿಹ್ನೆ ಯಾ / ಣ ಉಚ್ಚಾರದ ಚಿಹ್ನೆ ಣ ಎಂದಾದರೆ ಪ್ರಯಾಣ ಶಬ್ದದಲ್ಲಿ ರ ಉಚ್ಚಾರದ ಚಿಹ್ನೆ ಯಾವುದು ಇರಬಹುದು ?” ಎಂಬ ಪ್ರೇರಕನ ಪ್ರಶ್ನೆಗೆ “ಪ್ರಯಾಣ ಶಬ್ದದಲ್ಲಿ ‘್ರ’ ಚಿಹ್ನೆಯೇ ರಕಾರವನ್ನು ಸೂಚಿಸುತ್ತದೆ” ಎಂದು ವಯಸ್ಕರು ದೃಢವಾಗಿ ಹೇಳಬಲ್ಲರು.

ಇದಾದ ಮೇಲೆ ಪ್ರೇರಕನು ಮತ್ತೊಂದು ಪ್ರಶ್ನೆಯನ್ನು ಕೇಳುತ್ತಾನೆ: “‘್ರ’ ಒತ್ತಕ್ಷರವನ್ನು ರ ಅಕ್ಷರದೊಡನೆ ಹೋಲಿಸಿದಾಗ ಮತ್ತು ‘್ಥ’ ಒತ್ತಕ್ಷರವನ್ನು ಥ ಅಕ್ಷರದೊಡನೆ ಹೋಲಿಸಿದಾಗ, ರಕಾರದ ಒತ್ತಕ್ಷರವಾದ ‘್ರ’ ಹಾಗೂ ಥ ಕಾರದ ಒತ್ತಕ್ಷರವಾದ ‘್ಥ’ ಇವುಗಳಲ್ಲಿ ಸಮಾನವಾದ ಮತ್ತು ಬೇರೆ ಬೇರೆಯಾಗಿರುವ ಅಂಶಗಳು ಏನಾದರೂ ಇವೆಯೇ ?” ವಯಸ್ಕರು ತಾವಾಗಿಯೇ ಈ ಎರಡು ಒತ್ತಕ್ಷರಗಳಲ್ಲಿರುವ ವ್ಯತ್ಯಾಸವನ್ನು ಕಂಡುಹಿಡಿಯಲು ಶಕ್ತರು. ಎರಡೂ ಒತ್ತಕ್ಷರಗಳು ಇನ್ನೊಂದು ಒತ್ತಕ್ಷರದ ಕೆಳಗೆ ಬರುವುವು ಮತ್ತು ಚಿಕ್ಕದಾಗಿರುವುವು. ಇವು ಸಮಾನವಾದ ಸಂಗತಿಗಳು. ಬೇರೆ ಬೇರೆ ಆಗಿರುವ ಅಂಶವೆಂದರೆ ಥ ಕಾರದ ಒತ್ತಕ್ಷರ ‘್ಥ’ ಮೂಲಾಕ್ಷರವನ್ನು ಹೆಚ್ಚು ಹೋಲುತ್ತದೆ. ಕೇವಲ ತಲೆಕಟ್ಟು ಹೋಗಿದೆ. ಆದರೆ ರ ಕಾರದ ಒತ್ತಕ್ಷರ ‘್ರ’ ಮೂಲಾಕ್ಷರವನ್ನು ಹೆಚ್ಚು ಹೋಲುವುದಿಲ್ಲ. ಈ ಹಂತದಲ್ಲಿ ಪ್ರೇರಕನು ‘್ರ’ ಮಾದರಿಯ ಉಳಿದ ಎಲ್ಲಾ ಒತ್ತಕ್ಷರಗಳನ್ನು ಅವುಗಳ ಮೂಲಾಕ್ಷರಗಳೊಡನೆ ಪಟ್ಟಿಮಾಡಿ ಬರೆದು ಇನ್ನೂ ಕೆಲವು ಹೊಸ ಜ್ಞಾನದ ಅರಿವು ಮೂಡಿಸುತ್ತಾನೆ. ಹೊಸಜ್ಞಾನವು ಸಮಸ್ಯೆಯನ್ನು ಬಗೆಹರಿಸುವುದರ ಮೂಲಕ ಬಂದಿರುವುದರಿಂದ ಅದು ಪ್ರೇರಕನಿಂದ ಕೊಡಲ್ಪಟ್ಟ ಕಾಣಿಕೆಯಾಗಿ ಪರಿಣಮಿಸುವುದಿಲ್ಲ.

ಉದಾ : ರ ್ರ<br>ತ ್ತ<br>ನ ್ನ

ಮ ್ಮ
ಯ ್ಯ
ರ ್ರ
ಲ ್ಲ

### 3.3.14 ಮಹಾಪ್ರಾಣಗಳು

ಆಮಲಗೊಂದಿಯ ಸೂತ್ರಮಾಲೆಯಲ್ಲಿ 13ನೇ ಜನಕಶಬ್ದ ಮೂಢನಂಬಿಕೆ, ಇಲ್ಲಿ 'ಢ' ಎಂಬುದು ಮಹಾಪ್ರಾಣ. 2ನೇ ಜನಕಶಬ್ದವಾದ ಕಾಡು ಪದದಲ್ಲಿ 'ಡ' ಅಲ್ಪ ಪ್ರಾಣ ಇದೆ. ಅಷ್ಟೇ ಅಲ್ಲದೆ 13ನೇ ಜನಕಶಬ್ದದ ಪರಿಚಯ ಆದೊಡನೆ ಎಲ್ಲಾ ಅಲ್ಪಪ್ರಾಣಗಳ ಜ್ಞಾನವೂ ಬಂದಿರುತ್ತದೆ. ಪ್ರೇರಕನು ಡ ಮತ್ತು ಢ ಅಕ್ಷರಗಳನ್ನು ಕಪ್ಪುಹಲಗೆಯ ಮೇಲೆ ಬರೆದು ಕೆಲವು ಪ್ರಶ್ನೆಗಳ ಮುಖಾಂತರ ಈ ಎರಡು ಅಕ್ಷರ ಗಳಲ್ಲಿಯ ವ್ಯತ್ಯಾಸವನ್ನು ವಯಸ್ಕರು ಕಂಡುಹಿಡಿಯುವಂತೆ ಮಾಡುತ್ತಾನೆ.

ಡ ಢ

ಪ್ರೇರಕ : "ಈ ಎರಡು ಅಕ್ಷರಗಳಲ್ಲಿ ಏನಾದರೂ ಹೋಲಿಕೆ ಕಾಣುತ್ತೀರೋ ?

ವಯಸ್ಕ : "ಆ ಎರಡು ಅಕ್ಷರಗಳು ಸಾಧಾರಣ ಒಂದೇ ರೀತಿ ಇವೆ. ಆದರೆ ಎರಡನೇ ಅಕ್ಷರಕ್ಕೆ 'ಬಾಲ' ಒಂದು ಹೆಚ್ಚಿಗೆ ಇದೆ."

ಪ್ರೇರಕ : "ಆ ಎರಡು ಅಕ್ಷರಗಳ ಉಚ್ಚಾರಣೆಯಲ್ಲಿ ಏನಾದರೂ ಹೋಲಿಕೆ ಇದೆಯೋ ?"

ವಯಸ್ಕ : "ಎರಡು ಅಕ್ಷರಗಳ ಉಚ್ಚಾರವೂ ಸಾಧರಣ ಒಂದೇ. ಆದರೆ ಬಲಗಡೆಯ ಅಕ್ಷರಕ್ಕೆ ಹೆಚ್ಚು ಒತ್ತನ್ನು ಕೊಡಬೇಕು.

ಡ ಮತ್ತು ಢ ಅಕ್ಷರಗಳ ಹೋಲಿಕೆ ಮಾಡಿ ಅವುಗಳಲ್ಲಿಯ ವ್ಯತ್ಯಾಸವನ್ನು ಕಂಡುಹಿಡಿದ ಮೇಲೆ ಅದೇ ರೀತಿಯ ಸಂಬಂಧವಿರುವ ದ ಮತ್ತು ಧ, ಪ ಮತ್ತು ಫ ಅಕ್ಷರಗಳನ್ನು ಡ ಮತ್ತು ಢ ಅಕ್ಷರಗಳ ಕೆಳಗೆ ಕ್ರಮವಾಗಿ ಪ್ರೇರಕನು ಬರೆಯುವನು. ಬಲಬದಿಯಲ್ಲಿರುವ ಅಕ್ಷರ (ಮಹಾಪ್ರಾಣ) ಗಳನ್ನು ಎಡಬದಿಯಲ್ಲಿರುವ ಅಕ್ಷರ (ಅಲ್ಪಪ್ರಾಣ) ಗಳೊಡನೆ ಹೋಲಿಸಿ ಮಹಾಪ್ರಾಣಗಳ ಗುರುತನ್ನು ಪಡೆಯ ಲಾಗುವುದು.

ಡ ಢ
ದ ಧ
ಪ ಫ

ಇದೇ ರೀತಿಯ ಕ್ರಮವನ್ನನುಸರಿಸಿ ಅಲ್ಪಪ್ರಾಣದೊಡನೆ ಹೋಲಿಕೆ ಇರದ ಅಥವಾ ಅಲ್ಪಪ್ರಾಣಕ್ಕೆ 'ಬಾಲ' ಕೊಡುವುದರ ಜೊತೆಗೆ ಬೇರೆ ಮಾರ್ಪಾಡುಗಳನ್ನು ಹೊಂದಿರುವ ಮಹಾಪ್ರಾಣಗಳ ಪರಿಚಯವಾಗುವಂತೆ ನೋಡಿಕೊಳ್ಳಲಾಗುವುದು. ಮೊದಲು ಬೇರೆ ಬೇರೆ ಸಂದರ್ಭಗಳಲ್ಲಿ ಇಷ್ಟರವರೆಗೆ ಕಲಿತ ತ ಮತ್ತು ಥ ಅಕ್ಷರಗಳ ವ್ಯತ್ಯಾಸವನ್ನು ಕಂಡುಹಿಡಿಯುವಂತೆ ಮಾಡಲಾಗುವುದು.

ಡ ಢ
ತ ಥ

ಈ ಅಕ್ಷರಗಳ ಸಮವಿಸ ಹೋಲಿಕೆ ಮನವರಿಕೆ ಆದ ಮೇಲೆ ತ ಮತ್ತು ಥ ಅಕ್ಷರಗಳ ಕೆಳಗೆ ಕ್ರಮವಾಗಿ ಕ-ಖ, ಗ-ಘ, ಚ-ಛ, ಜ-ಝ, ಟ-ಠ, ಬ-ಭ ಅಕ್ಷರ ಗಳನ್ನು ಬರೆಯಲಾಗುವುದು. ತ ಮತ್ತು ಥ ಅಕ್ಷರಗಳಿಗೆ ಇರುವ ಸಂಬಂಧದ ಮಾದರಿಯಲ್ಲಿ, ಅವುಗಳ ಕೆಳಗೆ ಇರುವ ಬಲಬದಿಯಲ್ಲಿಯ ಅಕ್ಷರಗಳನ್ನು ಎಡಬದಿ ಯಲ್ಲಿರುವ ಅಕ್ಷರಗಳೊಡನೆ ಹೋಲಿಸುವುದರ ಮೂಲಕ ವಯಸ್ಕರು ಇನ್ನೂ ಕಲಿಯದಿದ್ದ ಮಹಾಪ್ರಾಣಗಳನ್ನು ಕಲಿಯುವರು.

ತ ಥ
ಕ ಖ
ಗ ಘ
ಚ ಛ
ಜ ಝ
ಟ ಠ
ಬ ಭ

3.3.15 ಮೂಲಾಕ್ಷರವನ್ನು ಸಂಪೂರ್ಣವಾಗಿ ಹೋಲುವ ಒತ್ತಕ್ಷರಗಳು

ಸೂತ್ರಮಾಲೆಯ **14**ನೇ ಜನಕಶಬ್ದ ಜ್ಞಾನ. ಇದರಲ್ಲಿಯ ಜಾ ಮತ್ತು ನ ಅಕ್ಷರಗಳ ಪರಿಚಯ ಈಗಾಗಲೇ ಇದೆ. '್ಞ' ಒಂದು ಒತ್ತಕ್ಷರವೆಂದು ವಯಸ್ಕ ರಿಗೆ ತಿಳಿಯುತ್ತದೆ. ಅದು ಮೂಲರೂಪದಲ್ಲಿ ಇನ್ನೂ ಬಂದಿಲ್ಲ. ಅದರ ಮೂಲಾಕ್ಷರವೂ ಅದೇ ರೂಪದಲ್ಲಿ ಮಾತ್ರ ದೊಡ್ಡದಾಗಿರುತ್ತದೆ. ಈ ವಿಷಯ

ವನ್ನು ವಯಸ್ಕರೇ ಕಂಡುಹಿಡಿಯುವಂತೆ ಮಾಡಲು '್ಞ' ಅಕ್ಷರದ ಎರಡು ರೂಪಗಳನ್ನು ಬರೆದು ಅವುಗಳನ್ನು ಹೋಲಿಸಲು ಕೇಳುತ್ತಾನೆ.

ಞ ್ಞ

ನಂತರ ಞ-್ಞ ಅಕ್ಷರಗಳ ಕೆಳಗೆ ಕ್ರಮವಾಗಿ ಖ-್ಖ, ಜ-್ಜ, ಟ-್ಟ, ಣ-್ಣ, ಬ-್ಬ, ಝ-್ಝ ಅಕ್ಷರಗಳನ್ನು ಬರೆದು ಅವುಗಳ ಪರಿಚಯವಾಗುವಂತೆ ಪ್ರೇರಕನು ನೋಡಿಕೊಳ್ಳುತ್ತಾನೆ. ಇವುಗಳಲ್ಲಿ ಝ ಅಕ್ಷರ ಒಂದನ್ನು ಬಿಟ್ಟರೆ ಉಳಿದ ಎಲ್ಲಾ ಅಕ್ಷರಗಳ ಪರಿಚಯ ಇಷ್ಟರವರೆಗೆ ಆಗಿದೆ.

ಞ ್ಞ<br>
ಖ ್ಖ<br>
ಜ ್ಜ<br>
ಟ ್ಟ<br>
ಣ ್ಣ<br>
ಬ ್ಬ<br>
ಝ ್ಝ

3.3.16 ಸೂತ್ರಮಾಲೆಯ 16ನೇ ಶಬ್ದ ಶುಚಿತ್ವ. ಇಲ್ಲಿ ಹೊಸದಾಗಿ ಕಲಿಯಬೇಕಾದ ಅಕ್ಷರ ಶು. ಈ ಅಕ್ಷರದ ಪರಿಚಯವಾದರೆ ಕನ್ನಡದ ಎಲ್ಲಾ ಅಕ್ಷರಗಳ ಪರಿಚಯವಾದಂತೆ. ಶ ಅಕ್ಷರ ಕಲಿತ ಮೇಲೆ ಇಷ್ಟರವರೆಗೆ ಕಲಿತ ಎಲ್ಲಾ ವ್ಯಂಜನಗಳಿಗೆ ಒತ್ತಕ್ಷರಗಳನ್ನು ಬರೆಯುವಂತೆ ಪ್ರೇರಕನು ವಯಸ್ಕರನ್ನು ಕೇಳಬಹುದು.

3.3.17 ಸೂತ್ರಮಾಲೆಯಲ್ಲಿ ಕೊನೆಯ ಶಬ್ದ ಐಶ್ವರ್ಯ. ಇದರಲ್ಲಿ ಕಲಿಯಬೇಕಾದ ಹೊಸ ಅಕ್ಷರ ಇಲ್ಲ. ಕೇವಲ ಅರ್ಕ ಚಿಹ್ನೆಯನ್ನು ಕಲಿಯಬೇಕಾಗಿರುವುದು. ಇದಕ್ಕೋಸ್ಕರ ಸಮಸ್ಯೆಯ ಬಗ್ಗೆ ಚರ್ಚೆ ನಡೆದ ಮೇಲೆ ಪ್ರೇರಕನು ಐಶ್ವರ್ಯ ಶಬ್ದದ ಕೆಳಗೆ ಐಶ್ವರ‍್ಯ ಎಂಬ ಪದದ ರೂಪ ಬರೆದು ಆ ಎರಡು ಪದಗಳನ್ನು ಹೋಲಿಸಲು ಕೇಳುತ್ತಾನೆ.

ಐಶ್ವರ್ಯ<br>
ಐಶ್ವರ‍್ಯ

ಈ ಎರಡು ಪದಗಳ ಹೋಲಿಕೆ ಮಾಡುವಾಗ ನಡೆಯುವ ಚರ್ಚೆ ಈ ರೀತಿ ಇರಬಹುದು :

ಪ್ರೇರಕ : "ಈ ಎರಡು ಪದಗಳಲ್ಲಿ ನೀವೇನಾದರೂ ಹೋಲಿಕೆ ಕಾಣುತ್ತೀರೋ ?"

ವಯಸ್ಕ : "ಮೊದಲ ಶಬ್ದದ ಕೊನೆಯ ಅಕ್ಷರ–ರ. ಅದಕ್ಕೆ ಯ ಕಾರದ ಒತ್ತು ('್ಯ') ಬಂದಿದೆ. ಎರಡನೇ ಪದದ ಕೊನೆಯ ಅಕ್ಷರ ಯ ಮತ್ತು ಅದರ ನಂತರ ಏನೋ ಒಂದು ಚಿಹ್ನೆ ಬಂದಿದೆ."

ಪ್ರೇರಕ : "ಆ ಚಿಹ್ನೆ ಏನಾಗಬಹುದು ? ಪದವನ್ನು ಉಚ್ಚಾರ ಮಾಡಿ ನೋಡಿದಾಗ ಏನು ಗೊತ್ತಾಗುತ್ತದೆ ?"

ವಯಸ್ಕ : "ಪದದ ಉಚ್ಚಾರ ಮಾಡುವಾಗ ರ ಕಾರ ಬರುತ್ತದೆ, ಆದರೆ ಬರೆಯುವಾಗ ರಕಾರ ಇನ್ನೂ ಬಂದಿಲ್ಲ....ಬಹುಶಃ ಯ ದ ನಂತರ ಬರುವ ಚಿಹ್ನೆಯೇ ರಕಾರವಾಗಿರಬೇಕು."

ಪ್ರೇರಕ : "'ೞ' ಚಿಹ್ನೆ ರ ಕಾರವಾದರೆ ಅದು ಯಾವ ಜಾಗದಲ್ಲಿದೆ ? ಉಚ್ಚಾರ ಮಾಡುವಾಗ ರ ಕಾರ ಯಾವ ಜಾಗದಲ್ಲಿ ಬರುತ್ತದೆ ?"

ವಯಸ್ಕ : "ಉಚ್ಚಾರ ಮಾಡುವಾಗ ರ ಕಾರ ಯ ಕಾರದ ಮೊದಲು ಬರುತ್ತದೆ. ಆದರೆ ರ ಕಾರದ 'ೞ' ಚಿಹ್ನೆ, ಯ ಅಕ್ಷರದ ನಂತರ ಬರೆಯಲ್ಪಟ್ಟಿದೆ."

3.4 ಈ ಕ್ರಮಗಳನ್ನು ಅನುಸರಿಸಿ, ಕೇವಲ 60 ರಿಂದ 70 ತಾಸುಗಳಲ್ಲಿ ವಯಸ್ಕರು ಕನ್ನಡ ಲಿಪಿಯ ಜ್ಞಾನವನ್ನು ಪಡೆಯುವರು. ಪ್ರೇರಕನು ವಯಸ್ಕರಲ್ಲಿ ಅಕ್ಷರ ಜ್ಞಾನವನ್ನು ಮೂಡಿಸುವಾಗ ಒಂದು ಸಂಗತಿಯನ್ನು ಮನಸ್ಸಿನಲ್ಲಿಟ್ಟರೆ ಉಚಿತ. ವಯಸ್ಕರಿಗೆ ಓದಲು ತಕ್ಕ ಮಟ್ಟಿಗೆ ಸುಲಭವಾಗಿದ್ದಂತೆ, ಬರೆಯಲು ಅಷ್ಟು ಸುಲಭವಾಗಿರುವುದಿಲ್ಲ. ಬರವಣಿಗೆಗೆ ಕೈಬೆರಳುಗಳು ಸುಲಭವಾಗಿ ಕೂಡಿ ಬರುವುದಿಲ್ಲ. ಮಾತ್ರ

ವಲ್ಲದೇ ವಯಸ್ಕರ ಜೀವನದಲ್ಲಿ ಓದುವಿಕೆಯ ಪ್ರಾಧಾನ್ಯವಿದ್ದಂತೆ ಬರೆಯುವಿಕೆಯ ಪ್ರಾಧಾನ್ಯವಿರುವುದಿಲ್ಲ. ಆದ್ದರಿಂದ ವಯಸ್ಕರು ಅಕ್ಷರಗಳನ್ನು ಕಲಿಯುವಾಗ ಓದುವಿಕೆಗೆ ಹೆಚ್ಚು ಮಹತ್ವ ಕೊಟ್ಟು, ಬರವಣಿಗೆಯನ್ನು ಸಾವಕಾಶವಾಗಿ ರೂಢಿಸಿಕೊಳ್ಳುವಂತೆ ಪ್ರೇರಕರು ನೋಡಿಕೊಳ್ಳಬಹುದು.

## 4. ಕಾರ್ಯನಿರ್ವಹಣೆ

ಚರ್ಚಾಕೂಟವು ಯಶಸ್ವಿಯಾಗಿ ನಡೆದರೆ ವಯಸ್ಕರು ಅಕ್ಷರಜ್ಞಾನವನ್ನು ಪಡೆಯುತ್ತಿದ್ದಂತೆ, ತಮ್ಮ ಜೀವನದ ಕೆಲವು ಮುಖ್ಯ ಸಮಸ್ಯೆಗಳ ಮೇಲೂ ವಿವೇಚನೆ ನಡೆಸುವರು. ಕನ್ನಡ ಭಾಷೆಯನ್ನು ಓದಲು ಬರೆಯಲು ಕಲಿತಂತೆ ತಮ್ಮ ಜೀವನವನ್ನು ಕಾಡುತ್ತಿದ್ದ ಕೆಲವು ಸಮಸ್ಯೆಗಳನ್ನು ಬಗೆಹರಿಸಲು ಯೋಗ್ಯ ಕ್ರಮಗಳನ್ನು ಕೈಗೊಳ್ಳುವರು. ಅಕ್ಷರಜ್ಞಾನದ ಕೊನೆಯ ಹಂತಕ್ಕೆ ಬರುತ್ತಿರುವಾಗ, ತಾವು ಒಟ್ಟುಗೂಡಿ, ಸಂವಾದದ ಮೂಲಕ ತಮ್ಮ ಅವಶ್ಯಕತೆಗಳನ್ನು ಪೂರೈಸುವ ಔಚಿತ್ಯವನ್ನು ಅರಿಯುವರು ಮತ್ತು ತಾವಾಗಿಯೇ ಚರ್ಚಾಕೂಟವನ್ನು ಮುಂದುವರಿಸಲು ನಿರ್ಧರಿಸಬಹುದು. ಇಂತಹ ಚರ್ಚಾಕೂಟಗಳಲ್ಲಿ ತಮ್ಮ ಕಾರ್ಯಕ್ರಮಗಳು ಯಶಸ್ವಿಯಾಗಿ ನಡೆಯುತ್ತಿವೆಯೇ ಎಂದು ಅವರು ನೋಡಿಕೊಳ್ಳುವರು ಹಾಗೂ ಹೊಸ ಸಮಸ್ಯೆಗಳು ತಲೆದೋರಿದ್ದರೆ ಅವನ್ನು ಸೂಕ್ತ ರೀತಿಯಲ್ಲಿ ಬಗೆಹರಿಸಲು ಕ್ರಮ ಕೈಗೊಳ್ಳುವರು. ಅದೇ ರೀತಿ ತಮ್ಮ ಅಕ್ಷರಜ್ಞಾನವನ್ನು ಬಲಪಡಿಸುವಂತೆಯೂ ಅವರು ನೋಡಿಕೊಳ್ಳಬಹುದು.

—o—

# ಅರಿವಿನ ಜಾಗೃತಿ ಮತ್ತು ಸಾಕ್ಷರತೆ

ಭಾಗ-೧ ತಾತ್ವಿಕ ವಿಷಯುಗಳು ಮತ್ತು ರೂಪರೇಷೆಗಳು

ಭಾಗ-೨ ಸೂತ್ರಮಾಲೆ, ಅಕ್ಷರಪಟಗಳು ಮತ್ತು ಪ್ರೇರಕನಿಗೆ ಸೂಚನೆಗಳು

ಭಾಗ-೩ ಕಲಿಯುವವನ ಸಂಗಾತಿ

ಭಾಗ-೪ ಜನಕವಿಚಾರಗಳ ಬಗ್ಗೆ ಸಾಮಾಜಿಕ ವಿಶ್ಲೇಷಣೆ ಮತ್ತು ಅಂಕಿಅಂಶಗಳು

(ಬೇಗನೆ ಸಿದ್ಧವಾಗಲಿದೆ)